CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೧೭, ೨೦೦೫ (ಫಾಲ್ಗುಣ ೨೬, ಶಕ ವರ್ಷ ೧೯೨೬) | ಸಂಚಿಕೆ ೧೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯಲ್ಲಿ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ನಾಗರೀಕ ಸೇವೆಗಳಲ್ಲಿ ವಿಧಾನಗಳ ಸರಳೀಕರಣ ಮತ್ತು ಇಲಾಖೆಗಳನ್ನು ಸೂಕ್ತ ಗಾತ್ರಕ್ಕೆ ತರುವುದು ಆಡಳಿತ ಸುಧಾರಣಾ ಆಯೋಗದ ಗುರಿಗಳಲ್ಲಿ ಒಂದಾಗಿದ್ದು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಗೆ ಸಂಬಂಧಿಸಿದಂತೆ, ಆಡಳಿತ ಸುಧಾರಣಾ ಆಯೋಗವು ಪ್ರಕಾರ್ಯಾತ್ಮಕ ಪರಾಮರ್ಶೆಯಲ್ಲಿ (Functional Review) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ವ್ಯಾಪ್ತಿಯಲ್ಲಿ ತಾಲ್ಲೂಕು ಪಂಚಾಯತ್ ಮಟ್ಟದಲ್ಲಿರುವ ಸಾಲ ವಿಸ್ತರಣಾಧಿಕಾರಿ ಹುದ್ದೆಯನ್ನು ತಾಲ್ಲೂಕು ಪಂಚಾಯತ್‌ಗಳಲ್ಲಿರುವ ಪಂಚಾಯತ್ ವಿಸ್ತರಣಾಧಿಕಾರಿ ಹುದ್ದೆಗಳೊಂದಿಗೆ ವಿಲೀನಗೊಳಿಸುವಂತೆ ಈ ಕೆಳಗಿನಂತೆ ಶಿಫಾರಸ್ಸು ಮಾಡಿದೆ.

| ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳು | ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ಅಭಿಪ್ರಾಯ | ಅಪರ ಮುಖ್ಯ ಕಾರ್ಯದರ್ಶಿ ಅವರ ಸಮಿತಿಯ ನಿರ್ಧಾರ | ಸಂಪುಟ ಉಪ ಸಮಿತಿಯ ಅಭಿಪ್ರಾಯ |
|---|---|---|---|
| ತಾಲ್ಲೂಕು ಪಂಚಾಯತ್ ನಲ್ಲಿನ ಸಾಲ ವಿಸ್ತರಣಾಧಿಕಾರಿ ಹುದ್ದೆಯನ್ನು ಪಂಚಾಯತ್ ವಿಸ್ತರಣಾಧಿಕಾರಿ ಹುದ್ದೆಯೊಂದಿಗೆ ವಿಲೀನ ಗೊಳಿಸಬಹುದಾಗಿರುತ್ತದೆ. | ಈ ಸಲಹೆಯನ್ನು ನಾವು ಒಪ್ಪುತ್ತೇವೆ, ಏಕೆಂದರೆ ಪ್ರಸ್ತುತ ತಾಲ್ಲೂಕು ಪಂಚಾಯತ್ ಹಂತದಲ್ಲಿ ಯಾವುದೇ ಸಾಲ ವಿಸ್ತರಣಾ ಕಾರ್ಯಗಳನ್ನು ಉಸ್ತುವಾರಿ ನಡೆಸುತ್ತಿರುವ ಅಥವಾ ಕೈಗೊಳ್ಳುತ್ತಿರುವುದು ಬಹಳ ಕಡಿಮೆಯಿರುತ್ತದೆ. | ಸಮಿತಿಯು ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ಶಿಫಾರಸ್ಸುಗಳನ್ನು ಒಪ್ಪುತ್ತದೆ. | ಸಂಪುಟ ಉಪಸಮಿತಿಯು ಇಲಾಖೆಯ ಅಭಿಪ್ರಾಯಗಳನ್ನು ಒಪ್ಪುತ್ತದೆ. |

ಈ ಶಿಫಾರಸ್ಸನ್ನು ಅಧಿಕಾರಯುತ ಸಮಿತಿ, ಹಾಗೂ ಸಚಿವ ಸಂಪುಟದ ಉಪಸಮಿತಿ ಪರಿಶೀಲಿಸಿ ಅನುಷ್ಠಾನಗೊಳಿಸಲು ಶಿಫಾರಸ್ಸು ಮಾಡಿರುವಂತೆ ಸಚಿವ ಸಂಪುಟವು ಸದರಿ ಹುದ್ದೆಗಳನ್ನು ರದ್ದುಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 21 ವಿಸೇಬಿ 2002, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ವ್ಯಾಪ್ತಿಯಲ್ಲಿ 176 ತಾಲ್ಲೂಕು ಪಂಚಾಯತ್‌ಗಳಲ್ಲಿರುವ 176 ಸಾಲ ವಿಸ್ತರಣಾಧಿಕಾರಿಗಳ ಹುದ್ದೆಗಳನ್ನು ಆಯಾ ತಾಲ್ಲೂಕು ಪಂಚಾಯಿತಿಗಳಲ್ಲಿರುವ ಪಂಚಾಯತ್ ವಿಸ್ತರಣಾಧಿಕಾರಿಗಳ ಹುದ್ದೆಗಳೊಂದಿಗೆ ವಿಲೀನಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಲ್. ಷಣ್ಮುಖ

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

ಪಿ.ಆರ್.283

**ENERGY SECRETARIAT**
**CORRIGENDUM**
**No. EN 37 NCE 2005 Bangalore, dated: 22nd February 2005**

In Government Order No. DE 443 NCE 2004 and DE 444 NCE 2004 dated 1.1.2005 wherever the date appears as 9.11.2002 shall be read as 9.11.2004 and in Government Order No. DE 428 NCE 2004 and DE 429 NCE 2004 dated 1.1.2005 wherever the word appears as "Sogi" shall be read as "Jogimatti, Chitradurga".

By Order and in the Name of the Governor of Karnataka,
**Suresh B. Krishnappanavar**
Under Secretary to Government, Energy Department.

PR-277

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯಲ್ಲಿ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ನಾಗರೀಕ ಸೇವೆಗಳಲ್ಲಿ ವಿಧಾನಗಳ ಸರಳೀಕರಣ ಮತ್ತು ಇಲಾಖೆಗಳನ್ನು ಸೂಕ್ತ ಗಾತ್ರಕ್ಕೆ ತರುವುದು ಆಡಳಿತ ಸುಧಾರಣಾ ಆಯೋಗದ ಗುರಿಗಳಲ್ಲಿ ಒಂದಾಗಿದ್ದು, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಗೆ ಸಂಬಂಧಿಸಿದಂತೆ, ಆಡಳಿತ ಸುಧಾರಣಾ ಆಯೋಗವು ಪ್ರಕಾರ್ಯಾತ್ಮಕ ಪರಾಮರ್ಶೆಯಲ್ಲಿ (Functional Review) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ವ್ಯಾಪ್ತಿಯಲ್ಲಿ ಜಿಲ್ಲಾ ಪಂಚಾಯತ್ ಮಟ್ಟದಲ್ಲಿರುವ ಪರಿಷತ್ ಕಾರ್ಯದರ್ಶಿ (Council Secretary) ಹುದ್ದೆಯನ್ನು ರದ್ದುಗೊಳಿಸುವಂತೆ ಈ ಕೆಳಗಿನಂತೆ ಶಿಫಾರಸ್ಸು ಮಾಡಿದೆ. ಈ ಶಿಫಾರಸ್ಸನ್ನು ಅಧಿಕಾರಯುತ ಸಮಿತಿ, ಹಾಗೂ ಸಂಪುಟ ಉಪ ಸಮಿತಿಯ ಮುಂದೆ ಮಂಡಿಸಲಾಗಿದ್ದು, ಅವುಗಳ ಶಿಫಾರಸ್ಸಿನಂತೆ ಸಚಿವ ಸಂಪುಟವು ಸದರಿ ಹುದ್ದೆಗಳನ್ನು ರದ್ದುಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

| ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳು | ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ಅಭಿಪ್ರಾಯ | ಅಪರ ಮುಖ್ಯ ಕಾರ್ಯದರ್ಶಿ ಅವರ ಸಮಿತಿಯ ನಿರ್ಧಾರ | ಸಂಪುಟ ಉಪ ಸಮಿತಿಯ ಅಭಿಪ್ರಾಯ |
|---|---|---|---|
| ಪರಿಷತ್ ಕಾರ್ಯದರ್ಶಿಯ ಹುದ್ದೆಯನ್ನು ರದ್ದು ಗೊಳಿಸಬಹುದು ಮತ್ತು ಸದರಿ ಕಾರ್ಯವನ್ನು ಜಿಲ್ಲಾ ಪಂಚಾಯತ್ ಮುಖ್ಯ ಯೋಜನಾಧಿಕಾರಿ ಅಥವಾ ಉಪ ಕಾರ್ಯದರ್ಶಿ ನಿರ್ವಹಿಸಬಹುದು. | ಜಿಲ್ಲಾ ಪಂಚಾಯತ್ ಹಂತದಲ್ಲಿ ಅಧಿಕಾರ ಶಾಹಿಯನ್ನು ಕಡಿಮೆ ಮಾಡುವ ಅವಶ್ಯಕತೆಯಿದೆ ಎಂಬುದನ್ನು ಇಲಾಖೆ ಒಪ್ಪುತ್ತದೆ. ಮುಖ್ಯ ಯೋಜನಾಧಿಕಾರಿ ಕಛೇರಿಗೆ ಸಂಬಂಧಿಸಿದಂತೆ ಮುಖ್ಯ ಯೋಜನಾಧಿಕಾರಿ ಅವರಿಗೆ ಪೂರ್ಣಕಾಲೀನ ಕಾರ್ಯಭಾರವಿಲ್ಲ ಎಂಬ ಆಡಳಿತ ಸುಧಾರಣಾ ಆಯೋಗದ ವರದಿಯನ್ನು ನಾವು ಒಪ್ಪುವುದಿಲ್ಲ. ಮತ್ತೊಂದೆಡೆ, ಹೆಚ್ಚು ಮುಕ್ತ ನಿಧಿಗಳನ್ನು ನೀಡುವ ಮೂಲಕ ವಿಕೇಂದ್ರೀಕೃತ ಯೋಜನೆ ರೂಪಿಸುವಿಕೆಗೆ ಒತ್ತು ಹೆಚ್ಚುತ್ತಿರುವ, ಜಿಲ್ಲಾ ಯೋಜನಾ ಸಮಿತಿಯ ಮೂಲಕ ವಿಕೇಂದ್ರೀಕೃತ ಯೋಜನೆ ರೂಪಿಸುವುದನ್ನು ಕೈಗೆತ್ತಿ ಕೊಳ್ಳುತ್ತಿರುವ ಮತ್ತು ಗ್ರಾಮ ಪಂಚಾಯತ್ ಹಂತದಿಂದ ಮೇಲ್ಪಟ್ಟು ಸಹಭಾಗಿ ಯೋಜನೆ ರೂಪಿಸಲು ಪ್ರಸ್ತಾಪಿಸಿರುವ ಹೊತ್ತಿನಲ್ಲಿ, ಜಿಲ್ಲಾ ಪಂಚಾಯತ್ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಎಲ್ಲಾ ಮೂರು ಹಂತಗಳ ಆಡಳಿತಕ್ಕಾಗಿ ಮುಖ್ಯ ಯೋಜನಾಧಿಕಾರಿ ಹುದ್ದೆ ನಿರ್ಣಾಯಕದ್ದಾಗಿರುತ್ತದೆ. ಎಂದು ನಾವು ಗ್ರಹಿಸಿದ್ದೇವೆ. ಪರಿಷತ್ ಕಾರ್ಯದರ್ಶಿಯ ಹುದ್ದೆಗೆ ಸಂಬಂಧಿಸಿದಂತೆ, ಅವರಿಗೆ ಪೂರ್ಣಕಾಲೀನ ಕಾರ್ಯಗಳು ಇರುವುದಿಲ್ಲ ಎಂಬುದನ್ನು ನಾನು ಒಪ್ಪುತ್ತೇನೆ ಮತ್ತು ಈ ಹುದ್ದೆಯನ್ನು ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನಂತೆ ರದ್ದು ಪಡಿಸಬಹುದಾಗಿರುತ್ತದೆ. | ಪರಿಷತ್ ಕಾರ್ಯದರ್ಶಿ ಮತ್ತು ಮುಖ್ಯ ಯೋಜನಾಧಿಕಾರಿ ಹುದ್ದೆಯನ್ನು ರದ್ದುಗೊಳಿಸ ಬಹುದೆಂದು ಸಮಿತಿ ಶಿಫಾರಸ್ಸು ಮಾಡುತ್ತದೆ. | ಅಪರ ಮುಖ್ಯ ಕಾರ್ಯದರ್ಶಿ ಸಮಿತಿಯ ನಿರ್ಧಾರವನ್ನು ಪರಿಷತ್ ಕಾರ್ಯದರ್ಶಿಯ ಹುದ್ದೆಗೆ ಸಂಬಂಧಿಸಿದಂತೆ ಅನುಮೋದಿಸಿದೆ. |

ಈ ಶಿಫಾರಸ್ಸನ್ನು ಅಧಿಕಾರಯುತ ಸಮಿತಿ, ಹಾಗೂ ಸಂಪುಟ ಉಪ ಸಮಿತಿಯ ಮುಂದೆ ಮಂಡಿಸಲಾಗಿದ್ದು, ಅವುಗಳ ಶಿಫಾರಸ್ಸಿನಂತೆ ಸಚಿವ ಸಂಪುಟವು ಸದರಿ ಹುದ್ದೆಗಳನ್ನು ರದ್ದುಗೊಳಿಸುವಂತೆ ತೀರ್ಮಾನಿಸಿದೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ 3 ಪರಿಷತ್ ಕಾರ್ಯದರ್ಶಿಗಳು, ಶ್ರೀ ವೈ. ಡಿ. ಕುನ್ನಿಭಾವಿ, ಜಿಲ್ಲಾ ಪಂಚಾಯತ್, ಧಾರವಾಡ, ಶ್ರೀ ಎ. ಐ. ಶಂಕರರಾಜು, ಜಿಲ್ಲಾ ಪಂಚಾಯತ್, ಮೈಸೂರು, ಹಾಗೂ ಶ್ರೀ ಅಶ್ರಫಲ್ ಹಸನ್-ಮಾಹಿತಿ ತಂತ್ರಜ್ಞಾನ ಇಲಾಖೆ (ನಿಯೋಜನೆ), ಜಿಲ್ಲಾ ಪಂಚಾಯತ್, ಕೋಲಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿ ಅಧಿಕಾರಿಗಳಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್

ಇಲಾಖೆಯಲ್ಲಿ ಪರ್ಯಾಯ ಹುದ್ದೆಗಳು ಲಭ್ಯವಿಲ್ಲದೆ ಇರುವುದರಿಂದ, ಈ ಮೂರು ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ 24 ಪರಿಷತ್ ಕಾರ್ಯದರ್ಶಿಗಳ ಖಾಲಿ ಹುದ್ದೆಗಳನ್ನು ರದ್ದುಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 21 ವಿಸೇಬಿ 2002, ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ವ್ಯಾಪ್ತಿಯಲ್ಲಿ 24 ಜಿಲ್ಲಾ ಪಂಚಾಯತ್‌ಗಳಲ್ಲಿರುವ 24 ಪರಿಷತ್ ಕಾರ್ಯದರ್ಶಿ ಹುದ್ದೆ (ವೇತನ ಶ್ರೇಣಿ 9580-14200)ಗಳನ್ನು ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ 3 ಪರಿಷತ್ ಕಾರ್ಯದರ್ಶಿಗಳು, ಶ್ರೀ ವೈ. ಡಿ. ಕುನ್ನಿಭಾವಿ, ಜಿಲ್ಲಾ ಪಂಚಾಯತ್, ಧಾರವಾಡ, ಶ್ರೀ ಎ. ಪಿ. ಶಂಕರರಾಜು, ಜಿಲ್ಲಾ ಪಂಚಾಯತ್ ಮೈಸೂರು, ಹಾಗೂ ಶ್ರೀ ಅಶ್ರಫಲ್ ಹಸನ್-ಮಾಹಿತಿ ತಂತ್ರಜ್ಞಾನ ಇಲಾಖೆ (ನಿಯೋಜನೆ), ಜಿಲ್ಲಾ ಪಂಚಾಯತ್, ಕೋಲಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಸದರಿ ಪರಿಷತ್ ಕಾರ್ಯದರ್ಶಿಗಳ ಬಡ್ತಿ ಪಡೆದಿರುವ ದಿನಾಂಕದಿಂದ ಅಥವಾ ನಿವೃತ್ತಿ ಹೊಂದುವ ದಿನಾಂಕ ಯಾವುದು ಮೊದಲು ಆ ದಿನಾಂಕದಿಂದ ಈ ಆದೇಶವನ್ನು ಜಾರಿಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಷಣ್ಮುಖ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

ಪಿ.ಆರ್.282

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವಿಜಯಕುಮಾರ್ ಮಾಜಿ ಪಿಸಿ ಇವರ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಎಸ್.ಪಿ. ಬೀದರ್ ಜಿಲ್ಲೆರವರ ಆದೇಶ ಸಂ. 6: ಡಿಇ:201: 2001-02: 1189:5: ಅಪು ಸಂ. 436:2002 ದಿನಾಂಕ: 30.7.2002.
2. ಐ.ಜಿ.ಪಿ. ಈಶಾನ್ಯವಲಯ, ಗುಲ್ಬರ್ಗಾರವರ ಆದೇಶ ಸಂಖ್ಯೆ: ಅಪೀಲು:85:ಈವ:02 ಅಪು ಸಂ. 33:ಈವ:03:268 ದಿನಾಂಕ: 28.01.2003.
3. ಅರ್ಜಿದಾರರ ಮನವಿ ದಿನಾಂಕ: 26.2.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ. ಅಪೀಲು 2 (5):2003-04 ದಿ:31.07.2003.

**ಪ್ರಸ್ತಾವನೆ:**

ಶ್ರೀ ವಿಜಯಕುಮಾರ್, ಮಾಜಿ ಪಿಸಿ, ಬೀದರ್ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡಾವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷಾರೋಪ:

"ಅಪೋ ಅ ರವರು, ದಿನಾಂಕ: 23.8.98 ರಿಂದ 28.8.98, 28.3.89, 24.6.89 ರಿಂದ 25.6.89, 30.6.99, 3.7.99, ರಿಂದ 8.7.99, 31.7.99, 1.8.99 ರಿಂದ 18.9.99, 31.8.99, 1.9.99 ರಿಂದ 3.9.99, 19.9.99, 4.9.99, 9.12.99 ರಿಂದ 10.12.99, 17.12.99 ರಿಂದ 31.12.99, 1.1.2000 ರಿಂದ 29.2.2000 1.3.2000 ರಿಂದ 31.3.2000, 1.4.2000 ರಿಂದ 4.4.2000 2.6.2000 ರಿಂದ 30.6.2000, 1.7.2000 ರಿಂದ 31.7.2000, 1.8.2000 ರಿಂದ 31.8.2000, 1.9.2000 ರಿಂದ 8.9.2000 ರಂದು ಹೀಗೆ ಒಟ್ಟು 271 ದಿವಸಗಳು ಗೈರುಹಾಜರು ಅಗಿ ಕರ್ತವ್ಯದಲ್ಲಿ ನಿಷ್ಕಾಳಜಿತನ ಮತ್ತು ಬೇಜವಾಬ್ದಾರಿತನ ಎಸಗಿದ್ದು."

"ದಿನಾಂಕ: 17.1.1999 ರಿಂದ 24.1.99 (8) ದಿವಸಗಳು ದಿನಾಂಕ: 5.4.2000 ರಿಂದ 30.4.2000 (26) ದಿವಸಗಳು, ದಿನಾಂಕ: 1.5.200 ರಿಂದ 31.5.2000 (31) ದಿವಸಗಳು ದಿನಾಂಕ: 9.9.2000 ರಿಂದ 24.9.2000 (16) ದಿವಸಗಳು ಹೀಗೆ ಒಟ್ಟು 81 ದಿವಸಗಳು ವಿಧಿ ಬದ್ಧ ನಿಯಮಗಳು ಅನುಸರಿಸದೆ ಕಾಯಿಲೆಯಾಗಿ ಕಾಯಿಲೆ ಬಗ್ಗೆ ಮಾಹಿತಿ ಸಲ್ಲಿಸದೇ ಸಂಬಂಧಿಸಿದ ದಾಖಲಾತಿ ಹಾಜರುಪಡಿಸದೇ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿಷ್ಕಾಳಿಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದು"

ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಕೆಸಿಎಸ್ ನಿಯಮ 95 (3) ರನ್ವಯ ಸೇವೆಯಿಂದ ತೆಗೆದುಹಾಕಿದ್ದು, ಇವರ ಮೇಲ್ಮನವಿ ತಿರಸ್ಕೃತವಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತು ಪ್ರಾಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರಿಗಳಿಗೆ ಸಲ್ಲಿಸಿದ ಸಮಜಾಯಿಷಿ: ಮನವಿಗಳಲ್ಲಿನ ಅಂಶಗಳನ್ನೇ ಪುನರಾವರ್ತಿಸಿರುತ್ತಾರೆ. ತಮ್ಮ ಮೇಲಿನ ಆಪಾದನೆಯನ್ನು ಅಲ್ಲಗಳೆಯವಂತಹ ಯಾವುದೇ ಹೊಸ ಅಂಶಗಳನ್ನು ಮಂಡಿಸಿರುವುದಿಲ್ಲ ಅರ್ಜಿದಾರರು ಪದೇ ಪದೇ ಕರ್ತವ್ಯಕ್ಕೆ ಗೈರುಹಾಜರಾಗುವ ಪ್ರವೃತ್ತಿಯುಳ್ಳವರಾಗಿದ್ದು ಶಿಸ್ತಿನ ಇಲಾಖೆಯಲ್ಲಿ ಈ ರೀತಿ ಕೆಲಸಕ್ಕೆ ಗೈರುಹಾಜರಾಗುವುದು ಸಾರ್ವಜನಿಕರಿಗೆ ಅನಾನುಕೂಲತೆಯನ್ನು ಹಾಗೂ ತೊಂದರೆಯನ್ನುಂಟು ಮಾಡುತ್ತದೆ. ಅಲ್ಲದೆ ಇವರಿಗೆ ವೈದ್ಯಾಧಿಕಾರಿಯವರು ನೀಡಿರುವ ವೈದ್ಯಕೀಯ ಸರ್ಟಿಫಿಕೇಟ್‌ನಲ್ಲಿ ಅರ್ಜಿದಾರರು 'ಆಲ್ಕೋಹಾಲಿಕ್ ಹೆಪಾಟಿಟಸ್' ಖಾಯಿಲೆಯಿಂದ ನರಳುತ್ತಿರುವುದಾಗಿ ಸರ್ಟಿಫೈ ಮಾಡಿರುತ್ತಾರೆ. ಖಾಯಿಲೆಯೂ ಸಹ ಅವರ ಕರ್ತವ್ಯದ ಮೇಲೆ ಪರಿಣಾಮ ಬೀರುತ್ತದೆ. ಆದಾಗ್ಯೂ ಅವರು ಸಲ್ಲಿಸಿರುವ ಸೇವೆಯನ್ನು ಗಮನದಲ್ಲಿಟ್ಟುಕೊಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 40 ಪೊಸಿಅ 2003 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿಜಯಕುಮಾರ್, ಮಾಜಿ ಪಿಸಿ ಬೀದರ್ ಜಿಲ್ಲೆ ರವರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

1. ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಸೇವೆಯಿಂದ ತೆಗೆದುಹಾಕುವ ಶಿಕ್ಷೆಯನ್ನು ಮಾರ್ಪಡಿಸಿ, ಸೇವೆಯಿಂದ ಕಡ್ಡಾಯ ನಿವೃತ್ತಿ ಗೊಳಿಸುವ ಶಿಕ್ಷೆಯನ್ನು ವಿಧಿಸಲಾಗಿದೆ."
2. ಈ ಶಿಕ್ಷೆ ದಿನಾಂಕ: 30.7.2002 ರಿಂದಲೇ ಜಾರಿಗೆ ಬರುತ್ತದೆ.
3. ಉಳಿದಂತೆ ಶಿಸ್ತು ಪ್ರಾಧಿಕಾರಿಯ ಆದೇಶದ ಉಳಿದ ಭಾಗ ಯಥಾವತ್ತಾಗಿ ಮುಂದುವರಿಯುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂ. ಪಿಎಸ್‌ಸಿ 27 ಸಿಎನ್‌ಎಸ್ 04 ದಿನಾಂಕ: 30.9.2004 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೋಲಿಸ್ ಸೇವೆಗಳು).

ಪಿ.ಆರ್.285

**ವಿಷಯ :** ಶ್ರೀ ಗೋವಿಂದರಾಜು, ಮಾಜಿ ಪಿಸಿ 519, 1ನೇ ಪಡೆ, ಕೆಎಸ್‌ಆರ್‌ಪಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿ೪: ಸಿಬ್ಬಂದಿ: 2:2000-01 ದಿನಾಂಕ: 26.7.2001.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿಐಜಿಪಿ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು:8:2001-02 ದಿನಾಂಕ: 18.5.2002.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿನಾಂಕ: 11.3.2004
4. ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು:2:23: 2004 ದಿನಾಂಕ: 25.09.2004.

**ಪ್ರಸ್ತಾವನೆ:**

ಶ್ರೀ ಗೋವಿಂದರಾಜು, ಮಾಜಿ ಪಿಸಿ 519, 1ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

1. ಪಿಸಿ 519, ಗೋವಿಂದರಾಜು, ಇ ದಳ, 1ನೇ ಪಡೆ, ಕೆಎಸ್‌ಆರ್‌ಪಿ ಬೆಂಗಳೂರು ಆದ ನೀವು ತಮ್ಮ 10 ವರ್ಷಗಳ ಸೇವಾವಧಿಯಲ್ಲಿ ಸುಮಾರು 2 ವರ್ಷಗಳಷ್ಟು ಗೈರುಹಾಜರಿಯಾಗಿರುತ್ತೀರಿ. ಮತ್ತು ನೀವು ದಿನಾಂಕ: 19.10.98 ರಿಂದ 18.11.98 ರವರೆಗೆ 31 ದಿವಸಗಳು ವೈದ್ಯಕೀಯ ಮೇರೆಗೆ ರಜೆ ಹೋಗಿ ಅದು ಇನ್ನೂ ಇತ್ಯರ್ಥವಾಗಿರುವುದಿಲ್ಲ. ಎರಡನೆಯದಾಗಿ ನೀವು ದಿನಾಂಕ: 5.4.99 ರಿಂದ 7.4.99ರ ವರೆಗೆ 3 ದಿವಸ ಸಾಂದರ್ಭಿಕ ರಜೆಯನ್ನು ಪಡೆದು ರಜೆಯ ಮೇಲೆ ತೆರಳಿದ್ದು ಮರಳಿ ದಿನಾಂಕ: 8.4.99 ರಂದು ಕರ್ತವ್ಯಕ್ಕೆ ಬಾರದೆ ತಮ್ಮ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿಯೇ ಇಲ್ಲಿಯತನಕ ಉಳಿದು ನೀವು ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ, ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ.

2. ಮೇಲ್ಕಂಡ ಗೈರುಹಾಜರಾದ ಸಂದರ್ಭದಲ್ಲಿ ನಿಮಗೆ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ಸೂಚನಾ ಪತ್ರ ಜಾರಿ ಮಾಡಿದ್ದಾಗ್ಯೂ ಸ್ವೀಕರಿಸಿಕೊಂಡು ಅದನ್ನು ಕಡೆಗಣಿಸಿ ನಿಗದಿತ ಸಮಯಕ್ಕೆ ಕರ್ತವ್ಯಕ್ಕೆ ಹಾಜರಾಗದೇ ಲೋಪವೆಸಗಿರುತ್ತೀರಿ.

3. ಹಾಗೂ ನೀವು ದಿನಾಂಕ: 19.10.98 ರಿಂದ 18.11.98ರ ವರೆಗೆ 31 ದಿವಸಗಳು ವೈದ್ಯಕೀಯ ಮೇರೆಗೆ ರಜೆ ಹೋಗಿ ಅದು ಇನ್ನೂ ಇತ್ಯರ್ಥವಾಗಿರುವುದಿಲ್ಲ. ಎರಡನೆಯದಾಗಿ ನೀವು ದಿನಾಂಕ: 5.4.99 ರಿಂದ 7.4.99 ರವರೆಗೆ 3 ದಿವಸ ಸಾಂದರ್ಭಿಕ ರಜೆಯನ್ನು ಪಡೆದು ರಜೆಯ ಮೇಲೆ ತೆರಳಿದ್ದು ಮರಳಿ ದಿನಾಂಕ: 8.4.99 ರಂದು ಕರ್ತವ್ಯಕ್ಕೆ ಬಾರದೆ ತಮ್ಮ ಕರ್ತವ್ಯಕ್ಕೆ ಬಾರದೆ ತಮ್ಮ ಕರ್ತವ್ಯಕ್ಕೆ ಇಲ್ಲಿಯತನಕ ಉಳಿದಿರುತ್ತೀರಿ. ಈ ಸಂಬಂಧ ಕರ್ತವ್ಯ ಪರಿತ್ಯಾಗ ಎಚ್ಚರಿಕೆ ನೋಟೀಸನ್ನು ಕಳುಹಿಸಿಕೊಟ್ಟಿದ್ದರೂ ಸಹ ಕರ್ತವ್ಯಕ್ಕೆ ಮರಳಿ ವರದಿಯನ್ನು ಮಾಡಿಕೊಳ್ಳದೆ ಇರುವುದು ಮತ್ತು ನೀವು ದಿನಾಂಕ: 20.1.1990 ರಲ್ಲಿ ಆರಕ್ಷಕ ಪೇದೆಯಾಗಿ ಭರ್ತಿಯಾಗಿ ನಿಮ್ಮ ಸೇವಾವಧಿಯಲ್ಲಿ ಅನೇಕ ಬಾರಿ ಯಾವುದೇ ಅನುಮತಿಯನ್ನಾಗಲೀ ಅಥವಾ ರಜೆಯನ್ನಾಗಲೀ ಪಡೆಯದೇ ತಮ್ಮ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿರುವುದು ಮತ್ತು ಗೈರುಹಾಜರಿಯ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವುದು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಆಶಿಸ್ತು ಮತ್ತು ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಮನವಿ ಪ್ರಾಧಿಕಾರದ ಆದೇಶದಲ್ಲಿರುವಂತೆ ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿಲ್ಲವೆಂಬ ಇಲಾಖಾ ವಿಚಾರಣಾ ವರದಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ 1ನೇ ಪಡೆ ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಗೈರುಹಾಜರಿ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಡಿಐಜಿಪಿ, ಕೆಎಸ್‌ಆರ್‌ಪಿ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ದ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಇದರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

"1. ಷೋಕಾಸ್ ನೋಟಿಸ್‌ನಲ್ಲಿ ತಮ್ಮನ್ನು ಸೇವೆಯಿಂದ ತೆಗೆದುಹಾಕುವ ಪ್ರಸ್ತಾಪವಿದ್ದು ಅಂತಿಮವಾಗಿ ಸೇವೆಯಿಂದ ವಜಾ ಮಾಡಿರುತ್ತಾರೆ ಇದು ತಾಂತ್ರಿಕ ದೋಷಯುಕ್ತ ಆದೇಶವಾದ್ದರಿಂದ ತನಗೆ ಅನುಕೂಲ ಮಾಡಿ ಕೊಡಬೇಕು.
2. ತಾನು ವೈದ್ಯಕೀಯ ಸರ್ಟಿಫಿಕೇಟ್‌ಗಳನ್ನು ನೀಡಿದ್ದು ತನಗೆ ನಿಜವಾಗಿ ಖಾಯಿಲೆ ಎಂದು ಸಾಬೀತಾಗುತ್ತದೆ. ಆದಾಗ್ಯೂ ತನಗೆ ಘೋರ ಶಿಕ್ಷೆ ವಿಧಿಸಲಾಗಿದೆ.

3. ಇಲಾಖಾ ವಿಚಾರಣೆಯಲ್ಲಿ ತನ್ನ ಮೇಲಿನ ಆರೋಪ ಸಾಬೀತಾಗಿರುವುದಿಲ್ಲ. ಕೆಸಿಎಸ್‌ಆರ್ ನಿಯಮ 10 (ಎ) ಪ್ರಕಾರ ತನ್ನದು ನಿಜವಾದ ಖಾಯಿಲೆಯಾದ್ದರಿಂದ ತನ್ನದು ಅನಧಿಕೃತ ಗೈರುಹಾಜರಿ ಅಲ್ಲ.
4. ತನ್ನ 4 ವರ್ಷದ ಖಾಯಿಲೆ ಅವಧಿಯನ್ನು ಸೇರಿಸಿ ಒಟ್ಟಾಗಿ ಶಿಕ್ಷೆ ವಿಧಿಸಿರುವುದು ಅನ್ಯಾಯ 1998ನೇ ಸಾಲಿನಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆದಿದ್ದು ಈ ಮೆಡಿಕಲ್ ಸರ್ಟಿಫಿಕೇಟ್‌ನ್ನು ಸಹ ಪರಿಗಣಿಸಿರುವುದಿಲ್ಲ.
5. ತಾನು ಪದೇ ಪದೇ ಗೈರುಹಾಜರಾಗುವ ಪ್ರವೃತ್ತಿಯುಳ್ಳವನೆಂಬ ತೀರ್ಮಾನಕ್ಕೆ ಬಂದು ಶಿಕ್ಷೆ ವಿಧಿಸಲಾಗಿದೆ. ಇದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧ.
6. ಕೆಎಟಿ ಆದೇಶ ಸಂ: 4576:90 ದಿನಾಂಕ: 9.01.1993 ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮೊದಲಿಗೆ ಗೈರುಹಾಜರಿಯನ್ನು ತೀರ್ಮಾನಿಸಬೇಕು. ವಿಚಾರಣೆಯ ಕೊನೆಯಲ್ಲಿ ಅಲ್ಲಿ ಎಂದು ತೀರ್ಪು ನೀಡಿದೆ. ಕೊನೆಯಲ್ಲಿ ಅಂದರೆ ಅಂತಿಮ ಆದೇಶದಲ್ಲಿ ತನ್ನ ಗೈರುಹಾಜರಿಯ ಬಗ್ಗೆ ತೀರ್ಮಾನಿಸಲಾಗಿದೆ. ಇದು ನಿಯಮ ವಿರುದ್ಧ ಕೊನೆಯಲ್ಲಿ ಅಂದರೆ ಅಂತಿಮ ಆದೇಶದಲ್ಲಿ ತನ್ನ ಗೈರುಹಾಜರಿಯ ಬಗ್ಗೆ ತೀರ್ಮಾನಿಸಲಾಗಿದೆ.

ಅರ್ಜಿದಾರರು ಮಂಡಿಸಿರುವ ವಾದ ಹಾಗೂ ಇಲಾಖಾ ವಿಚಾರಣೆ ವರದಿಗಳನ್ನು ಕೂಲಂಕಶವಾಗಿ ಪರಿಶೀಲಿಸಿದ ನಂತರ, ಇವರ ಹತ್ತು ವರ್ಷಗಳ ಸೇವಾ ಅವಧಿಯಲ್ಲಿ ಎರಡು ವರ್ಷಗಳಷ್ಟು ಗೈರುಹಾಜರಾದ ಬಗ್ಗೆ ಕಂಡು ಬರುತ್ತದೆ ಇವರು ಶಿಸ್ತಿನ ಪಡೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಪದೇ ಪದೇ ಗೈರುಹಾಜರಾಗುವುದು. ಇದೇ ಪ್ರವೃತ್ತಿಯನ್ನು ಪುನರಾವರ್ತನೆ ಮಾಡಿರುವುದು ಶಿಸ್ತಿನ ಇಲಾಖೆಯ ನಡವಳಿಕೆಗೆ ವ್ಯತಿರಿಕ್ತವಾಗಿ ನಡೆದುಕೊಂಡಿರುವುದನ್ನು ಗಮನದಲ್ಲಿಟ್ಟುಕೊಂಡು, ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯು ಸಮಂಜಸವಾಗಿರುವುದರಿಂದ ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2004 ಬೆಂಗಳೂರು ದಿನಾಂಕ: 9ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋವಿಂದರಾಜು, ಮಾಜಿ ಪಿ. ಸಿ. 519 1ನೇ ಪಡೆ ಕೆಎಸ್‌ಆರ್‌ಪಿ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್.286

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಶಿಫಾರಸ್ಸು ಮಾಡಲು ತಜ್ಞರ ಸಮಿತಿ ರಚಿಸುವ ಬಗ್ಗೆ.

**ಪ್ರಸ್ತಾವನೆ:**

ದಿನಾಂಕ: 18.1.2005 ರಂದು ಮಾನ್ಯ ಜಲ ಸಂಪನ್ಮೂಲ ಹಾಗೂ ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಪರಿಶೀಲನಾ ಸಭೆಯಲ್ಲಿ ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆಯು ಪರಿಣಾಮಕಾರಿಯಾಗಲು ಹಾಗೂ ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ, ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಹಾಗೂ ಸರ್ಕಾರವು ಕೈಗೊಳ್ಳಬೇಕಾದ ನೀತಿಗಳ ಬಗ್ಗೆ ಶಿಫಾರಸ್ಸು ಮಾಡಲು ತಜ್ಞರ ಸಮಿತಿ ರಚಿಸುವಂತೆ ನಿರ್ಧರಿಸಲಾಗಿದೆ. ಆದುದರಿಂದ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 12 ಸಿಎಎಂ 2005, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿಷಯಗಳ ಹಿನ್ನೆಲೆಯಲ್ಲಿ, ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆಯು ಪರಿಣಾಮಕಾರಿಯಾಗಲು ಹಾಗೂ ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ, ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳನ್ನು ಹಾಗೂ ಸರ್ಕಾರವು ಕೈಗೊಳ್ಳಬೇಕಾದ ನೀತಿಗಳ ಬಗ್ಗೆ ಶಿಫಾರಸ್ಸು ಮಾಡಲು ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ವ್ಯವಸ್ಥಾಪಕ ನಿರ್ದೇಶಕರು,<br>ಹಾಗೂ ಪದನಿಮಿತ್ತ ಪ್ರಧಾನ ಕಾರ್ಯದರ್ಶಿ, ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ, ಬೆಂಗಳೂರು. | ಅಧ್ಯಕ್ಷರು |
| 2. | ವ್ಯವಸ್ಥಾಪಕ ನಿರ್ದೇಶಕರು,<br>ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು | ಸದಸ್ಯರು |
| 3. | ಆಡಳಿತಾಧಿಕಾರಿಗಳು, ಕಾಡಾ<br>ಕಾವೇರಿ ಜಲಾನಯನ ಯೋಜನೆ, ಮೈಸೂರು, | ಸದಸ್ಯರು |
| 4. | ನಿರ್ದೇಶಕರು,<br>ಜಲ ಮತ್ತು ನೆಲ ನಿರ್ವಹಣಾ ಸಂಸ್ಥೆ, ಧಾರವಾಡ | ಸದಸ್ಯ ಕಾರ್ಯದರ್ಶಿ |

ಸಮಿತಿಯು ನೀರಾವರಿಗೆ ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳನ್ನು ಪರಿಶೀಲಿಸಿ, ಸರ್ಕಾರ ಅನುಸರಿಸಬೇಕಾದ ನೀತಿಗಳ ಬಗ್ಗೆ ಅಧ್ಯಯನ ಮಾಡಿ, ನೀರು ನಿರ್ವಹಣೆಯಲ್ಲಿ ರೈತರ ಪಾಲ್ಗೊಳ್ಳುವಿಕೆಯು ಪರಿಣಾಮಕಾರಿಯಾಗಲು ಹಾಗೂ ರಾಜ್ಯದ ನೀರಾವರಿ ಯೋಜನೆಗಳಡಿಯಲ್ಲಿ ನೀರಿನ ಸಮರ್ಪಕ ಬಳಕೆಗಾಗಿ, ಸಂಬಂಧಿಸಿದ ಅಧಿನಿಯಮಗಳು ಹಾಗೂ ನಿಯಮಗಳಿಗೆ ಅವಶ್ಯವಿರುವ ತಿದ್ದುಪಡಿಗಳು ಹಾಗೂ ಸರ್ಕಾರವು ಕೈಗೊಳ್ಳಬೇಕಾದ ನೀತಿಗಳು ಇವುಗಳ ಬಗ್ಗೆ, ಈ ಆದೇಶ ಹೊರಡಿಸಿದ ಒಂದು ತಿಂಗಳ ಒಳಗಾಗಿ, ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ವಾಸುದೇವ ಹೆಬ್ಬಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ, (ಕಾಡಾ).

ಪಿ.ಆರ್.289

**ವಿಷಯ :** ಮಲಪ್ರಭಾ ಮತ್ತು ಘಟಪ್ರಭಾ ಯೋಜನಾ ವಲಯದ ಅಧಿಕಾರಿಗಳು/ ಸಿಬ್ಬಂದಿಗೆ ಯೋಜನಾ ಭತ್ಯೆಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ನೀಇ 56 ಎನ್‌ಐಎನ್ 2000 ದಿನಾಂಕ: 9.10.02.

2. ಮುಖ್ಯ ಇಂಜಿನಿಯರ್, ನೀರಾವರಿ (ಉತ್ತರ), ಬೆಳಗಾಂ ಇವರ ಪತ್ರ ಸಂಖ್ಯೆ: ಸಿಇಎನ್:01:ಪಿಎಎಲ್:ಇಎಸ್‌ಡಿ: 2000-01 ದಿನಾಂಕ: 07.03.03.

**ಪ್ರಸ್ತಾವನೆ:**

ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ಮಲಪ್ರಭಾ ಮತ್ತು ಘಟಪ್ರಭಾ ಯೋಜನಾ ಸಿಬ್ಬಂದಿಗೆ ಯೋಜನಾ ಭತ್ಯೆಯನ್ನು ದಿನಾಂಕ: 1.4.98 ರಿಂದ 31.5.99 ರವರೆಗೆ 1994 ರ ವೇತನ ಶ್ರೇಣಿಯ ಮೂಲವೇತನದ ಶೇ.8 ರಷ್ಟು ಮಾಹೆಯಾನ ಗರಿಷ್ಠ ರೂ.150/- ಗಳಿಗೆ ಮೀರದಂತೆ ಮತ್ತು ದಿನಾಂಕ: 1.06.99 ರಿಂದ 31.03.2001 ರವರೆಗೆ 1999 ರ ವೇತನ ಶ್ರೇಣಿಯ ಮೂಲ ವೇತನದ ಶೇ. 4 ರಷ್ಟು ಮಾಹೆಯಾನ ರೂ.150/- ಗಳಿಗೆ ಮೀರದಂತೆ ಮಂಜೂರು ಮಾಡಿ ಆದೇಶ ಹೊರಡಿಸಲಾಗಿತ್ತು. ಮುಖ್ಯ ಇಂಜಿನಿಯರ್, ನೀರಾವರಿ (ಉತ್ತರ), ಬೆಳಗಾಂರವರು ಉಲ್ಲೇಖ(2)ರ ಪತ್ರದಲ್ಲಿ ಮೇಲೆ ಓದಲಾದ ಸರ್ಕಾರಿ ಆದೇಶದ ಅನುಬಂಧದಲ್ಲಿ ಬಿಟ್ಟಿರುವ ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಯ ವಿಭಾಗ ಹಾಗೂ ಉಪ ವಿಭಾಗಗಳ ಕಚೇರಿಯ ಅಧಿಕಾರಿಗಳು/ಸಿಬ್ಬಂದಿಗಳ ಯೋಜನಾ ಭತ್ಯೆಯನ್ನು ದಿನಾಂಕ: 1.4.98 ರಿಂದ 31.3.2001ರ ಅವಧಿಗೆ ಯೋಜನಾ ಭತ್ಯೆಯನ್ನು ಮುಂದುವರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 20 ಎನ್‌ಐಎನ್ 2004 ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2005**

ಮೇಲ್ಕಂಡ ಪ್ರಸ್ತಾವನೆಯಂತೆ ಈ ಕೆಳಕಂಡ ಕಚೇರಿಗಳ ಅಧಿಕಾರಿ ಹಾಗೂ ಸಿಬ್ಬಂದಿಗಳಿಗೆ ದಿನಾಂಕ: 01.04.99 ರಿಂದ 31.05.99 ರವರೆಗೆ 1994ರ ವೇತನ ಶ್ರೇಣಿಯ ಮೂಲವೇತನದ ಶೇ. 8 ರಷ್ಟು ಮಾಹೆಯಾನ ಗರಿಷ್ಠ ರೂ.150/- ಗಳಿಗೆ ಮೀರದಂತೆ ಮತ್ತು ದಿನಾಂಕ: 01.06.99 ರಿಂದ 31.03.01 ರವರೆಗೆ 1999ರ ವೇತನ ಶ್ರೇಣಿಯ ಮೂಲ ವೇತನದ ಶೇ. 4 ರಷ್ಟು ಮಾಹೆಯಾನ ಗರಿಷ್ಠ ರೂ.150/- ಗಳಿಗೆ ಮೀರದಂತೆ ಯೋಜನಾ ಭತ್ಯೆಯ ವೆಚ್ಚವನ್ನು ಕರ್ನಾಟಕ ನೀರಾವರಿ ನಿಗಮದಿಂದ ಭರಿಸುವ ಷರತ್ತಿಗೊಳಪಟ್ಟು ಯೋಜನಾ ಭತ್ಯೆಯನ್ನು ಮುಂದುವರಿಸಲು ಅನುಮೋದನೆಯನ್ನು ನೀಡಿದೆ.

1. ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ನವಿಲು ತೀರ್ಥ.
2. ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ನವಿಲುತೀರ್ಥ.
3. ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಹಿಡಕಲ್ ಡ್ಯಾಂ.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 1097 ಆಕೋ-1/2004, ದಿನಾಂಕ: 24.01.05, ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಶ್ರೀಧರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,( ವಿ.ಬ್ಯಾ.ಯೋ).

ಪಿ.ಆರ್.290

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಆಕುಕ 385 ಪಿಐಎಂ 2004 ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2005**

ದಿನಾಂಕ: 19.10.2004 ರ ಇದೇ ಸಮಸಂಖ್ಯೆಯ ಅಧಿಸೂಚನೆಯ ಕ್ರಮ ಸಂಖ್ಯೆ: 25 ರಲ್ಲಿ ಕಾಲಂ 2ರಲ್ಲಿ ಡಾ: ಟಿ.ಎನ್. ಸುಮಿತ ಎಂದು ನಮೂದಿಸಿರುವ ಹೆಸರಿನ ಬದಲಾಗಿ ಡಾ: ಟಿ. ಎಸ್. ಸುಮಿತ ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಅನಿಲ್‌ಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ-2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.291

## HEALTH AND FAMILY WELFARE SECRETARIAT

**Sub :** Department al Enquiry Dr. L. M. Karjigi Lecturer in Pediatrics Vijayanagar Institutions of Medical Sciences Bellary.

**Read :** 1. G. O. No. HFW 19 MCL 85: dated: 23.01.1989.

2. D. O. No. ವಶ್ರೀಅ (3)65/1981-82 dated: 16.03.2000 of the Joint Director Medical Education.

3. Letter No. GE III/M 5 2003-04/868 dated: 06.04.2004 of the AG (A&E) Karnataka Bangalore.

**Preamble:**

1. Dr. L. M. Karjigi, Lecturer in Pediatrics. Vijayanagar Institutions of Medical Sciences Bellary had remained unauthorisedly absent from duty from 16.02.1981. Departmental Enquiry was instituted against him by issue of notice No. HFW 19 MCL 83, dated 09.03.1986 by publishing the articles of charges etc in Deccan Herald dated 25.07.1986 and Samyuktha Karnataka dated: 26.07.1986 under rule 11 of the KCS (CCA) Rules, 1957, Dr. D. B. Meundi, JDME was appointed as Enquiry Authority. He had submitted the report of enquiry held expart against the AGO on 11.10.1990. Later in GL No. HFW 29 MCL 83, dated 08.08.2000 the Accountant General (A & E) was requested to furnish his service particulars to

consider imposition of penalty. In his letter dated 06.04.2004 the AG (A&E) has furnished a brief service particulars of the AGO. His date of birth is 12.06.1942. He was appointed in Government service on 29.08.1969. He worked continuously from 29.08.1969 to 15.02.1981. He absented from duty unauthorisedly from 16.02.1981.

2. He has attained superannuation on 30.06.2000 No action has been taken to impose any penalty on him with respect to the proven charge of mis-conduct of unauthorized absence for over 19 years. It is impermissible to proceed against him in view of the limitation of 4 years prescribed in rule 214 of KCSRs.,

**Government Order No HFW 48 MCL 2004 Bangalore dated: 17th January 2005**

3. Government of Karnataka hereby orders not to entertain and accept and process application/ pension papers if any submitted by Dr. L. M. Karjigi the then Lecturer in pediatrics, Vijayanagar Institutions of Medical Sciences, Bellary, claiming pensionery benefits without the express and formal orders of the Government.

By Order and in the name of the Governor of Karnataka,

**S. NAGARAJU**

Under Secretary to Government,

PR-292 Health & Family Welfare Department, (Medical Education).

**ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ**

**ವಿಷಯ :** ಶ್ರೀ ಎ. ಕುತ್ಬುದ್ದೀನ್, ಪ್ರಗತಿ ಸಹಾಯಕರು, ತಾಲ್ಲೂಕು ಪಂಚಾಯತಿ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ, ಇವರು ಲೋಕಾಯುಕ್ತ ಬಲೆಗೆ ಸಿಕ್ಕಿ ಬಿದ್ದಿದ್ದು, ಇಲಾಖಾ ವಿಚಾರಣೆ ನಡೆಸಲು ಲೋಕಾಯುಕ್ತ ಸಂಸ್ಥೆಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1. ಸಂಖ್ಯೆ: ಗ್ರಾಅಪ:398: ಕೆಎಸ್‌ಎಸ್:2004, ದಿನಾಂಕ: 10.11.2004.
2. ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರ ಪತ್ರ ಸಂಖ್ಯೆ: ಆಸಾಂನಿ ಆಡಳಿತ-11:114: 2004-05, ದಿನಾಂಕ: 13.12.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 10.11.2004ರ ಪತ್ರದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಶ್ರೀ ಎ. ಕುತ್ಬುದ್ದೀನ್, ಹಿಂದಿನ ಪ್ರಗತಿ ಸಹಾಯಕರು, ತಾಲ್ಲೂಕು ಪಂಚಾಯತ್, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ, (ಪ್ರಸ್ತುತ ಸಹಾಯಕ ಸಾಂಖ್ಯಿಕ ಅಧಿಕಾರಿ, ಜಿಲ್ಲಾ ಕುಷ್ಠರೋಗ ನಿವಾರಣಾಧಿಕಾರಿಗಳ ಕಛೇರಿ, ಚಿತ್ರದುರ್ಗ ಜಿಲ್ಲೆ), ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಪಿ. ಕೆ. ದೂತೇಶ್, ಇವರ ಮಾವನವರಾದ ಶ್ರೀ ಹಾಲಪ್ಪನವರಿಗೆ ಆಶ್ರಯ ಯೋಜನೆಯಡಿಯಲ್ಲಿ ಮನೆಯನ್ನು ಕಟ್ಟಲು ರೂ. 19,000.00 ಗಳ ಸಹಾಯ ಧನವನ್ನು ಹೊಸದುರ್ಗ ತಾಲ್ಲೂಕು ಪಂಚಾಯಿತಿ ಕಚೇರಿಯಿಂದ ಮಂಜೂರು ಮಾಡಲಾಗಿದ್ದು, ಅದರಂತೆ ಶ್ರೀ ಹಾಲಪ್ಪನವರು ಹೊಸದುರ್ಗ ತಾಲ್ಲೂಕು, ಅರೇಹಳ್ಳಿ ಗ್ರಾಮದಲ್ಲಿ ಆಶ್ರಯ ಯೋಜನೆಯಲ್ಲಿ ಮನೆಯನ್ನು ಕಟ್ಟಿದ್ದು, ಅವರಿಗೆ ಈಗಾಗಲೇ ಮೊದಲನೆ ಕಂತಿನ ಸಹಾಯಧನ ರೂ.8,000.00 ಗಳ ಚೆಕ್ಕನ್ನು ಹೊಸದುರ್ಗ ತಾಲ್ಲೂಕು ಪಂಚಾಯತ್ ಕಚೇರಿಯಿಂದ ನೀಡಿದ್ದು, 2ನೇ ಕಂತಿನ ಸಹಾಯ ಧನದ ರೂ.8000.00 ಗಳ ಚೆಕ್ಕನ್ನು ನೀಡಲು ದಿನಾಂಕ: 30.08.2001 ರಂದು ಹೊಸದುರ್ಗ ತಾಲ್ಲೂಕು ಪಂಚಾಯತ್ ಕಚೇರಿಯಲ್ಲಿ ಆರೋಪಿಯು ರೂ. 500.00 ಗಳ ಲಂಚವನ್ನು ಕೇಳಿ, ಆಗಲೇ ಅವರಿಂದ ರೂ. 100.00 ಗಳ ಲಂಚವನ್ನು ಪಡೆದಿದ್ದು, ಉಳಿದ ರೂ. 400.00 ಗಳ ಲಂಚವನ್ನು ದಿನಾಂಕ: 31.08.2001 ರಂದು ಪಡೆಯುತ್ತಿದ್ದಾಗ, ಕರ್ನಾಟಕ ಲೋಕಾಯುಕ್ತದ ಬಲೆಯಲ್ಲಿ ಸಿಕ್ಕಿಬಿದ್ದಿದ್ದು, ಇವರ ವಿರುದ್ಧ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಲೋಕಾಯುಕ್ತ ಸಂಸ್ಥೆಗೆ ವಹಿಸುವ ಕುರಿತು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವನ್ನು ಕ್ರಮ ವಹಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2)ರ ಪತ್ರ ದಿನಾಂಕ: 3.12.2004 ರಲ್ಲಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ರವರು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಮಾಡಲಾದ ಆಪಾದನೆಗಳ ಕುರಿತು ವಿಚಾರಣೆ ನಡೆಸುವುದು ಸೂಕ್ತವೆಂದು ಅಭಿಪ್ರಾಯಿಸಿರುತ್ತಾರೆ. ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(ಎ) ರನ್ವಯ ಪ್ರಕರಣವನ್ನು ವಿಚಾರಣೆಗಾಗಿ ಮಾನ್ಯ ಲೋಕಾಯುಕ್ತರಿಗೆ ವಹಿಸಲು ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿಎಸ್:169: ಎಸ್‌ಎಂಸಿ 2004, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2005**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ) ರನ್ವಯ ಶ್ರೀ ಎ. ಕುತ್ಬುದ್ದೀನ್, ಹಿಂದಿನ ಪ್ರಗತಿ ಸಹಾಯಕರು ತಾಲ್ಲೂಕು ಪಂಚಾಯಿತಿ, ಹೊಸದುರ್ಗ ಜಿಲ್ಲೆ (ಪ್ರಸ್ತುತ ಸಹಾಯಕ ಸಾಂಖ್ಯಿಕ ಅಧಿಕಾರಿ, ಜಿಲ್ಲಾ ಕುಷ್ಠರೋಗ ನಿವಾರಣಾಧಿಕಾರಿಗಳ ಕಛೇರಿ, ಚಿತ್ರದುರ್ಗ ಜಿಲ್ಲೆ) ಇವರ ವಿರುದ್ಧ ಮಾಡಲಾದ ಮೇಲ್ಕಂಡ ಆಪಾದನೆಗಳ ಕುರಿತು ವಿಚಾರಣೆಯನ್ನು ನಡೆಸುವ ಸಲುವಾಗಿ ಪ್ರಕರಣವನ್ನು ಲೋಕಾಯುಕ್ತ ಸಂಸ್ಥೆಗೆ ವಹಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಸುಧಾಬಾಯಿ**

ಪಿ.ಆರ್.293 ಪೀಠಾಧಿಕಾರಿ, ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಗದಗ ಜಿಲ್ಲೆ ಗದಗ-ಬೆಟಗೇರಿ ವ್ಯಾಪಕಾಭಿವೃದ್ಧಿ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ. ನಅಇ 200 ಬೆಮಪ್ರಾ 2003, ದಿನಾಂಕ: 5.4.2004.
2. ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ, ಗದಗ ಇವರ ಪತ್ರ ಸಂ. ನಅಪ್ರಾ ಗ.ಬೆ/401/2004-05, ದಿನಾಂಕ: 5.4.2004.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂ.ನಯೋ (09) ಪವ್ಯಾಅಯೋ/ಅವಿತ/ಗದಗ-ಬೆಟಗೇರಿ/ 2004, ದಿನಾಂಕ: 25.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಗದಗ ಜಿಲ್ಲೆ, ಗದಗ-ಬೆಟಗೇರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪಕಾಭಿವೃದ್ಧಿ ಯೋಜನೆಗೆ ತಾತ್ಕಾಲಿಕ ಅನುಮೋದನೆಯನ್ನು ನೀಡಿದೆ.

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಗದಗ ಜಿಲ್ಲೆ, ಗದಗ-ಬೆಟ್ಟಗೇರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಪರಿಷ್ಕತ ವ್ಯಾಪಕಾಭಿವೃದ್ಧಿ ಯೋಜನೆಗೆ ನಕ್ಷೆ ಮತ್ತು ವರದಿಯನ್ನು ತಯಾರಿಸಿರುತ್ತಾರೆ.

ಮೇಲೆ ಓದಲಾದ (3)ರ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪಟ್ಟಣದ ಜನಸಂಖ್ಯೆಯು 2021ನೇ ಇಸವಿಗೆ 2.75 ಲಕ್ಷವೆಂದು ಅಂದಾಜಿಸಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯನ್ನು ತಯಾರಿಸಲಾಗಿದೆಯೆಂದು ಸದರಿ ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣವು 233.71 ಚ.ಕಿ.ಮೀ. ಇದ್ದು ಈ ವ್ಯಾಪ್ತಿಯಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ ಸಂಚಾರ ವ್ಯವಸ್ಥೆಯ ಸಮಸ್ಯೆಗಳನ್ನು ವಿರೋಧಿಸಿ ಯೋಜನಾ ತತ್ವ ಹಾಗೂ ವ್ಯಾಪಕಾಭಿವೃದ್ಧಿ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 21ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯನ್ನು ರೂಪಿಸಿ ಹಾಗೂ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯ ವಲಯ ನಿಯಮಾವಳಿಗಳನ್ನು ರಚಿಸಲಾಗಿದೆಯೆಂದು ಯೋಜನೆಯಲ್ಲಿ ಭವಿಷ್ಯದ ಬೆಳವಣಿಗೆಗಾಗಿ ಒಟ್ಟು 3585.48 ಹೆಕ್ಟೇರ್ ಪ್ರದೇಶವನ್ನು ಪ್ರಸ್ತಾಪಿಸಲಾಗಿದ್ದು, ಇದರಲ್ಲಿ ವಸತಿಗಾಗಿ 1752.45 ಹೆಕ್ಟೇರ್ ವಾಣಿಜ್ಯಕ್ಕಾಗಿ 186.00 ಹೆಕ್ಟೇರ್, ಕೈಗಾರಿಕೆಗಾಗಿ 320.00 ಹೆಕ್ಟೇರ್ ಸಾರ್ವಜನಿಕ ಅರೆ ಸಾರ್ವಜನಿಕ ಉದ್ದೇಶಕ್ಕಾಗಿ 271.89 ಹೆಕ್ಟೇರ್ ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 358.00 ಹೆಕ್ಟೇರ್ ನಾಗರೀಕ ಸೌಲಭ್ಯಕ್ಕಾಗಿ 22.25 ಹೆಕ್ಟೇರ್ ಸಾರಿಗೆ ಮತ್ತು ಸಂಪರ್ಕಕ್ಕಾಗಿ 624.49 ಹೆಕ್ಟೇರ್ ಪ್ರದೇಶವನ್ನು ಹಾಗೂ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಬರುವ ಆರು ಗ್ರಾಮಗಳ ಅಭಿವೃದ್ಧಿ ಕ್ಷೇತ್ರ ಹೊರತುಪಡಿಸಿದಂತೆ, 19,785,43 ಹೆಕ್ಟೇರ್ ಪ್ರದೇಶವನ್ನು ವ್ಯವಸಾಯ ವಲಯಕ್ಕಾಗಿ ಕಾಯ್ದಿರಿಸಿ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಯನ್ನು ಅಂತಿಮವಾಗಿ ರೂಪಿಸಲಾಗಿದೆ ಎಂದು ತಿಳಿಸುತ್ತಾ ಕೆಟಿಸಿಪಿ ಕಾಯ್ದೆ 1961 ಪ್ರಕರಣ 22(2) ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 24 ಬೆಮಪ್ರಾ 2005, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

ಗದಗ ಜಿಲ್ಲೆ, ಗದಗ-ಬೆಟಗೇರಿ ಪಟ್ಟಣದ ವ್ಯಾಪಕಾಭಿವೃದ್ಧಿ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 22(3) ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡಿದೆ.

ವ್ಯಾಪಕಾಭಿವೃದ್ಧಿ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀಧರಮೂರ್ತಿ**

ಪಿ.ಆರ್.294 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಕನ್ನಡ ಭವನ ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಅವರ ಪತ್ರ ಸಂ. ಕಸನಿ:ಕಭ:11:2004-05 ದಿನಾಂಕ: 24.11.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರು ಪ್ರಸಕ್ತ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4202-02-00-800-1-02 ಸ್ಮಾರಕಗಳು (ಯೋಜನೇತರ) ಅಡಿಯಲ್ಲಿ ರೂ.100.00 ಲಕ್ಷಗಳನ್ನು ಹಂಚಿಕೆ ಮಾಡಿದ್ದು, ಸದರಿ ಹಣದಲ್ಲಿ ರೂ.50.00 ಲಕ್ಷಗಳು ವೆಚ್ಚವಾಗದೇ ಉಳಿತಾಯವಾಗುವ ಸಂಭವವಿರುವುದರಿಂದ ಸದರಿ ಹಣವನ್ನು ಸರ್ಕಾರಕ್ಕೆ ಅಧ್ಯರ್ಪಣೆ ಮಾಡಲಾಗಿದ್ದು, ಈ ಹಣವನ್ನು ಮರು ಹೊಂದಾಣಿಕೆ ಮಾಡಿ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಆದರೆ ಆರ್ಥಿಕ ಇಲಾಖೆಯು ಈ ಮರು ಹೊಂದಾಣಿಕೆಯ ತಃಖ್ತೆಯು ಯೋಜನೆಯ ಅಡಿಯಿಂದ ಯೋಜನೇತರಕ್ಕೆ ಸೂಚಿಸಿರುವುದರಿಂದ ಇದನ್ನು ಒಪ್ಪದೇ ಇದರ ಬದಲಾಗಿ ಯೋಜನೇತರ ಲೆಕ್ಕ ಶೀರ್ಷಿಕೆ 4202-04-800-02-1-02 ಒದಗಿಸಲಾದ ರೂ.100.00 ಲಕ್ಷಗಳಲ್ಲಿ ರೂ.50.00 ಲಕ್ಷಗಳನ್ನು ಅಧ್ಯರ್ಪಿಸಿ ಅಷ್ಟೆ ಮೊತ್ತದ ಹೆಚ್ಚುವರಿ ಅನುದಾನವನ್ನು ನೀಡಲು ಅನುಮತಿಸಿದೆ, ಆದ್ದರಿಂದ ಸರ್ಕಾರ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 104 ಕರಅ 2004, ಬೆಂಗಳೂರು ದಿನಾಂಕ: 3ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಭವನ ಚಾಲುಕ್ಯ ವಿಭಾಗದ ಕಟ್ಟಡ ಕಾಮಗಾರಿಗಾಗಿ ಪ್ರಸಕ್ತ ಸಾಲಿನಲ್ಲಿ 50.00 (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಲಕ್ಷ ರೂ.ಗಳ ಅನುದಾನವನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರ ಮುಖಾಂತರ ಕಾರ್ಯಪಾಲಕ ಇಂಜಿನಿಯರ್, ನಂ. 2 ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4202-04-800-1-01- ಜಿಲ್ಲಾ ರಂಗಮಂದಿರ ನಿರ್ಮಾಣ ಹಾಗೂ ಕನ್ನಡ ಭವನ ನಿರ್ಮಾಣ ನಿರ್ವಹಣೆ (ಯೋಜನೆ) ಅಡಿಯಲ್ಲಿ ಹೆಚ್ಚುವರಿ ಅನುದಾನವಾಗಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 1557, ವೆಚ್ಚ-5, 2004 ದಿನಾಂಕ: 15.10.2004ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೆ. ರಾಮಚಂದ್ರ**

ಪಿ.ಆರ್.295 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವಿ. ಪುಟ್ಟಸ್ವಾಮಿ ಸಮೂಹ 'ಬಿ' ಅಧಿಕಾರಿಗಳು (ನಿವೃತ್ತ) ಇವರ ವಿರುದ್ಧದ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಪ್ರಸ್ತಾವನೆ:**

ಶ್ರೀ ವಿ. ಪುಟ್ಟಸ್ವಾಮಿ ಸಮೂಹ 'ಬಿ' ಅಧಿಕಾರಿಗಳು (ನಿವೃತ್ತ) ಇವರು ಬೆಂಗಳೂರಿನ ಶ್ರೀ ಬನಶಂಕರಿ ದೇವಸ್ಥಾನದ ಕಾರ್ಯನಿರ್ವಾಹಣಾಧಿಕಾರಿಗಳಾಗಿ ದಿನಾಂಕ: 18.3.2001 ರಿಂದ 2.7.2002 ರವರೆಗೆ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ದೇವಾಲಯ ಸೇವಾರ್ಥ ಬಾಕಿ ಬಾಬ್ತು ಎಂದು ರೂ. 1,60,850-00 ಗಳನ್ನು ಬ್ಯಾಂಕ್‌ನಿಂದ ಡ್ರಾ ಮಾಡಿ ಸಂಬಂಧಿಸಿದವರಿಗೆ ಪಾವತಿ ಮಾಡದೇ ದುರುಪಯೋಗ ಪಡಿಸಿಕೊಂಡಿರುವ ಆರೋಪದ ಬಗ್ಗೆ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 312 ಮುಸೇವಿ 2004 ದಿನಾಂಕ: 19ನೇ ಫೆಬ್ರವರಿ 2005**

ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 214ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಧಾರ್ಮಿಕ ದತ್ತಿ ಇಲಾಖೆಯ ನಿವೃತ್ತ ಸಮೂಹ 'ಬಿ' ಅಧಿಕಾರಿಯಾದ ಶ್ರೀ ವಿ. ಪುಟ್ಟಸ್ವಾಮಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್.299 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಮುಜರಾಯಿ).

## ಸಹಕಾರ ಸಚಿವಾಲಯ

**ವಿಷಯ :** 2004-05ನೇ ಸಾಲಿನಲ್ಲಿ ಯಶಸ್ವಿನಿ ರೈತರ ಸಹಕಾರಿ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ಅಪರ ನಿಬಂಧಕರು (ಅ ಮತ್ತು ಆ) ರವರ ಪ್ರಸ್ತಾವೆ ಸಂಖ್ಯೆ: ಆರ್‌ಸಿಎಸ್:ಯುಸೆಲ್:103:04-05 ದಿನಾಂಕ: 16.09.2004.

**ಪ್ರಸ್ತಾವನೆ:**

ರಾಜ್ಯದಲ್ಲಿ ದಿನಾಂಕ: 14.11.2002 ರಂದು ಮಾನ್ಯ ಮುಖ್ಯಮಂತ್ರಿಯವರು ಸಾಂಕೇತಿಕವಾಗಿ ಪ್ರಾರಂಭಿಸಿದ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ಯೋಜನೆ ರಾಷ್ಟ್ರದಲ್ಲಿ ವಿನೂತನವಾಗಿದ್ದು, ಸದರಿ ಯೋಜನೆಯು ದಿನಾಂಕ: 01.06.2003 ರಿಂದ ಜಾರಿಯಲ್ಲಿದ್ದು, ಮೊದಲನೆಯ ವರ್ಷದಲ್ಲಿ ಒಟ್ಟು 16,01,152 ರೈತ ಸದಸ್ಯರನ್ನು ಈ ಯೋಜನೆಯಡಿ ನೋಂದಾಯಿಸಿದ್ದು 2004-05ನೇ ದ್ವಿತೀಯ ವರ್ಷದಲ್ಲಿ ಈ ಯೋಜನೆಯು ಹಾಲಿ ಜಾರಿಯಲ್ಲಿದ್ದು 20,29,144 ರೈತರನ್ನು ಈ ಯೋಜನೆಯಡಿ ಫಲಾನುಭವಿಗಳಾಗಿ ನೋಂದಾಯಿಸಲಾಗುತ್ತಿದೆ.

ಮೇಲೆ ಓದಲಾದ ದಿನಾಂಕ: 16.09.2004ರ ಸಹಕಾರ ಸಂಘಗಳ ನಿಬಂಧಕರು ತಮ್ಮ ಪತ್ರದಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿ ಈಗಾಗಲೇ ರೈತ ಸದಸ್ಯರು ರಾಜ್ಯಾದ್ಯಂತ ಗುರುತಿಸಿರುವ 114 ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ತಮಗೆ ಅನುಕೂಲವಾಗುವ, ಸ್ಥಳದಲ್ಲಿ ಶಸ್ತ್ರ ಚಿಕಿತ್ಸೆ ಮತ್ತು ಹೊರರೋಗ ಚಿಕಿತ್ಸೆಗಳ ಸೌಲಭ್ಯ ಪಡೆಯುತ್ತಿದ್ದು, ಇಂತಹ ಚಿಕಿತ್ಸೆಯನ್ನು ಒದಗಿಸುವ ಆಸ್ಪತ್ರೆಗಳಿಗೆ ಯಶಸ್ವಿನಿ ಟ್ರಸ್ಟ್‌ನಿಂದ ಕಾಲಕಾಲಕ್ಕೆ ಹಣ ಪಾವತಿಸಲಾಗುತ್ತಿದ್ದು, ರೈತ ಫಲಾನುಭವಿಗಳು ಈ ಸೌಲಭ್ಯ ಪಡೆಯಲು ಅನುವಾಗಲು 2004-05ನೇ ಪ್ರಸಕ್ತ ಸಾಲಿನಲ್ಲಿ ರಾಜ್ಯ ಸರ್ಕಾರ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ರೂ. 357.88 ಲಕ್ಷಗಳ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿದ್ದು, ಈ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425-00-108-0-57 ಯಶಸ್ವಿನಿ-059 ರಡಿ ರೂ. 357.88 ಲಕ್ಷಗಳನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇದರಲ್ಲಿನ ಯಶಸ್ವಿನಿ ಟ್ರಸ್ಟಿನ ಖಾತೆಗೆ ಬಿಡುಗಡೆ ಮಾಡಲು ಆದೇಶ ಕೋರಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 116 ಸಿಎಲ್ಎಸ್ 2004 ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಯಶಸ್ವಿನಿ ಯೋಜನೆಗೆ ಸಂಬಂಧಿಸಿದಂತೆ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 357.88 ಲಕ್ಷಗಳ ಪೈಕಿ ರೂ.200.00 ಲಕ್ಷ (ಎರಡು ನೂರು ಲಕ್ಷ ರೂಪಾಯಿಗಳು) ಮಾತ್ರ ಲೆಕ್ಕ ಶೀರ್ಷಿಕೆ 2425-00-108-0-57 ಯಶಸ್ವಿನಿ-059 (ಯೋಜನೆ) ರಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಮೇಲು ರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಅ ಮತ್ತು ಆ), ಬೆಂಗಳೂರು ಇವರು ಖಜಾನೆಯಿಂದ ಡ್ರಾ ಮಾಡಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಟ್ರಸ್ಟಿನ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/ವೆಚ್ಚ-2/36-05 ದಿನಾಂಕ: 08.02.2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿ.ಆರ್.298 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಕಾನೂನು ಸಚಿವಾಲಯ

**ವಿಷಯ :** ಕ್ರಿಮಿನಲ್ ಪ್ರೊಸಿಜರ್ ಕೋಡ್‌ನ ಅಧಿನಿಯಮ-13 ಮತ್ತು 18 ರಡಿ ಸ್ಥಾಪಿಸಲಾದ ವಿಶೇಷ ಮೆಟ್ರೊಪಾಲಿಟನ್ ಮ್ಯಾಜಿಸ್ಟ್ರೇಟ್ ಹಾಗೂ ವಿಶೇಷ ನ್ಯಾಯಾಂಗ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ-ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ 18 ಎಲ್ಎಸಿ 2004, ದಿನಾಂಕ: 7.4.2004
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಓಬಿ (1) 419:93, ದಿನಾಂಕ: 12.1.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 7.4.2004ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಮುಂದೆ ತೋರಿಸಲಾದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ: | ನ್ಯಾಯಾಲಯದ ಹೆಸರು | ದಿನಾಂಕ |
|---|---|---|
| 1. | 1ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2003 |
| 2. | 2ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2003 |
| 3. | 3ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2003 |
| 4. | 4ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2003 |
| 5. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಬಿಜಾಪುರ | - 02.10.2003 |
| 6. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಗುಲ್ಬರ್ಗ | - 04.12.2003 |
| 7. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಬೆಳಗಾಂ | - 17.02.2004 |
| 8. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಮೈಸೂರು. | - 12.10.2003 |
| 9. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಧಾರವಾಡ | - 24.01.2004 |
| 10. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ದಕ್ಷಿಣಕನ್ನಡ, ಮಂಗಳೂರು | - 11.11.2003 |

ಮೇಲ್ಕಂಡ ನ್ಯಾಯಾಲಯಗಳ ಕಾರ್ಯಾವಧಿಯು ಮುಕ್ತಾಯಗೊಳ್ಳುವುದರಿಂದಲೂ ಮತ್ತು ಸದರಿ ನ್ಯಾಯಾಲಯಗಳಲ್ಲಿ ಅಧಿಕ ಪ್ರಕರಣಗಳು ಬಾಕಿ ಇರುವುದರಿಂದ ಮೇಲ್ಕಂಡ ನ್ಯಾಯಾಲಯಗಳನ್ನು ಅವುಗಳ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ಸ್: ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್ಸ್ ಮತ್ತು ಹೊಂದಿಕೊಂಡ ಸಿಬ್ಬಂದಿಯೊಂದಿಗೆ ಕಾರ್ಯಾವಧಿ ಮುಕ್ತಾಯಗೊಂಡ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 27 ಎಲ್ಎಸಿ 2005 ಬೆಂಗಳೂರು ದಿನಾಂಕ: 5ನೇ ಫೆಬ್ರವರಿ 2005**

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಆಯಾ ನ್ಯಾಯಾಲಯಗಳ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

| ಕ್ರಮ ಸಂಖ್ಯೆ: | ನ್ಯಾಯಾಲಯದ ಹೆಸರು | ದಿನಾಂಕ |
|---|---|---|
| 1. | 1ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2004 |
| 2. | 2ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2004 |
| 3. | 3ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2004 |
| 4. | 4ನೇ ಸ್ಪೆಷಲ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್, ಬೆಂಗಳೂರು | - 14.11.2004 |
| 5. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಬಿಜಾಪುರ | - 02.10.2004 |
| 6. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಗುಲ್ಬರ್ಗ | - 04.12.2004 |
| 7. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಬೆಳಗಾಂ | - 17.02.2005 |
| 8. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಮೈಸೂರು. | - 12.10.2004 |
| 9. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ಧಾರವಾಡ | - 24.01.2005 |
| 10. | ಸ್ಪೆಷಲ್ ಜ್ಯೂಡಿಷಿಯಲ್ ಮ್ಯಾಜಿಸ್ಟ್ರೇಟ್, ದಕ್ಷಿಣಕನ್ನಡ, ಮಂಗಳೂರು | - 11.11.2004 |

ಇವುಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-108-0-01- ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.302

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಶ್ರೀ ಹೆಚ್. ಜಿ. ವೆಂಕಟೇಶ್, ವಕೀಲರು, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ ಇವರನ್ನು ಕೆ.ಆರ್. ಪೇಟೆ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 24.2.2003ರ ಸರ್ಕಾರಿ ಆದೇಶ ಸಂಖ್ಯೆ: ಲಾ 149 ಎಲ್‌ಸಿಎಲ್ 2002.

2. ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಮಂಡ್ಯರವರ ಪತ್ರ ಸಂಖ್ಯೆ: 545/04, ದಿನಾಂಕ: 4.2.2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 24.2.2003ರ ಸರ್ಕಾರಿ ಆದೇಶದಲ್ಲಿ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿದೆ.

ಹೆಚ್ಚುವರಿಯಾಗಿ ಮಂಜೂರು ಮಾಡಲಾಗಿರುವ ನೋಟರಿ ಹುದ್ದೆಗೆ ಮೇಲೆ ಓದಲಾಗಿರುವ (2) ದಿನಾಂಕ: 4.2.2004ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಮಂಡ್ಯ ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂ. ಲಾ 149 ಎಲ್‌ಸಿಎಲ್ 2002 ಬೆಂಗಳೂರು, ದಿನಾಂಕ: 29ನೇ ಜನವರಿ 2005**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8 (1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಹೆಚ್.ಜಿ. ವೆಂಕಟೇಶ್, ವಕೀಲರು, ಒಕ್ಕಲಿಗರ ಹಾಸ್ಟೆಲ್ ಬಿಲ್ಡಿಂಗ್, ಮೈನ್ ರಸ್ತೆ, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ ಇವರನ್ನು ವೃತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಕೆ. ಆರ್. ಪೇಟೆ, ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952 ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಈಶ್ವರ ಪ್ರಸಾದ್**

ಪಿ.ಆರ್.303

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2).

**ವಿಷಯ :** ಹುಬ್ಬಳ್ಳಿಯ ವಿಶೇಷ ನ್ಯಾಯಿಕ ದಂಡಾಧಿಕಾರಿ (ರೈಲ್ವೆಗಳು) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಲಾ 19 ಎಲ್‌ಎಸಿ 2003, ದಿನಾಂಕ: 20.2.2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಒಬಿ: 2: 405: 2004, ದಿನಾಂಕ: 26.11.2004

**ಪ್ರಸ್ತಾವನೆ:**

ಹುಬ್ಬಳ್ಳಿಯ ವಿಶೇಷ ನ್ಯಾಯಿಕ ದಂಡಾಧಿಕಾರಿ (ರೈಲ್ವೆಗಳು) ನ್ಯಾಯಾಲಯವನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 133 ಎಲ್‌ಎಸಿ 2004, ಬೆಂಗಳೂರು ದಿನಾಂಕ: 22ನೇ ಡಿಸೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಹುಬ್ಬಳ್ಳಿಯ ವಿಶೇಷ ನ್ಯಾಯಿಕ ದಂಡಾಧಿಕಾರಿ (ರೈಲ್ವೆಗಳು) ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01 ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.304

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಶಿವಮೊಗ್ಗ ಜಿಲ್ಲೆಯ ನ್ಯಾಯಾಲಯಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 116 ಎಲ್‌ಸಿಇ 85, ದಿನಾಂಕ: 2.3.1987
2. ಸರ್ಕಾರದ ಆದೇಶ ಸಂಖ್ಯೆ: ಲಾ 9 ಎಲ್‌ಸಿಇ 82, ದಿನಾಂಕ: 25.5.1982
3. ಸರ್ಕಾರದ ಆದೇಶ ಸಂಖ್ಯೆ: ಲಾ 175 ಎಲ್‌ಸಿಇ 81, ದಿನಾಂಕ: 4.8.1982
4. ಸರ್ಕಾರದ ಆದೇಶ ಸಂಖ್ಯೆ: ಲಾ 148 ಎಲ್‌ಸಿಇ 82, ದಿನಾಂಕ: 27.3.1999
5. ಸರ್ಕಾರದ ಆದೇಶ ಸಂಖ್ಯೆ: ಲಾ 80 ಎಲ್‌ಸಿಇ 91, ದಿನಾಂಕ: 20.3.1992
6. ಸರ್ಕಾರದ ಆದೇಶ ಸಂಖ್ಯೆ: ಲಾ 180 ಎಲ್‌ಸಿಇ 90, ದಿನಾಂಕ: 16.3.1993
7. ಸರ್ಕಾರದ ಆದೇಶ ಸಂಖ್ಯೆ: ಲಾ 116 ಎಲ್‌ಸಿಇ 96, ದಿನಾಂಕ: 31.3.1997
8. ಸರ್ಕಾರದ ಆದೇಶ ಸಂಖ್ಯೆ: ಲಾ 142 ಎಲ್‌ಸಿಇ 2002, ದಿನಾಂಕ: 3.3.2003
9. ಸರ್ಕಾರದ ಆದೇಶ ಸಂಖ್ಯೆ: ಲಾ 30 ಎಲ್‌ಸಿಇ 2004, ದಿನಾಂಕ: 16.7.2004
10. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಒಬಿ:2:67 (100-106) 2004, ದಿನಾಂಕ: 19.2.2004.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳನ್ನು ಕ್ರಮವಾಗಿ ಮೇಲೆ ಓದಲಾದ (1) ರಿಂದ (7) ರವರೆಗಿನ ಸರ್ಕಾರಿ ಆದೇಶಗಳಲ್ಲಿ ಸೃಜಿಸಲಾಗಿತ್ತು. ಮತ್ತು ಮೇಲೆ ಓದಲಾದ (8) ರಲ್ಲಿನ ದಿನಾಂಕ: 3.3.2003ರ ಆದೇಶದಲ್ಲಿ ಸಾಗರದಲ್ಲಿನ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿಯನ್ನು ಶಿವಮೊಗ್ಗಕ್ಕೆ ಸ್ಥಳಾಂತರಿಸಲಾಗಿದೆ. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಮೇಲೆ ಓದಲಾದ (9) ರಲ್ಲಿನ ದಿನಾಂಕ: 16.7.2004ರ ಸರ್ಕಾರಿ ಆದೇಶದಲ್ಲಿ ದಿನಾಂಕ: 1.4.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಶಿವಮೊಗ್ಗ
2. ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಭದ್ರಾವತಿ
3. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ತೀರ್ಥಹಳ್ಳಿ
4. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಸೊರಬ
5. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹೊಸನಗರ
6. 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಂಎಫ್‌ಸಿ, ಭದ್ರಾವತಿ
7. 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಂಎಫ್‌ಸಿ, ಸಾಗರ

ಮೇಲ್ಕಂಡ ನ್ಯಾಯಾಲಯಗಳನ್ನು ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಖಾಯಂಗೊಳಿಸುವಂತೆ ಮೇಲೆ (10) ರಲ್ಲಿ ಓದಲಾದ ದಿನಾಂಕ: 19.2.2004ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯರವರು ಶಿಫಾರಸ್ಸು ಮಾಡಿದ್ದು, ಸದರಿ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 30 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರ ಶಿಫಾರಸ್ಸಿನಂತೆ ಈ ಕೆಳಕಂಡ ನ್ಯಾಯಾಲಯಗಳನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ (ಅನುಬಂಧದಲ್ಲಿ ತೋರಿಸಿರುವಂತೆ) ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂಗೊಳಿಸಿದೆ.

1. ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಶಿವಮೊಗ್ಗ
2. ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಭದ್ರಾವತಿ
3. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ತೀರ್ಥಹಳ್ಳಿ
4. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಸೊರಬ
5. ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹೊಸನಗರ
6. 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಭದ್ರಾವತಿ
7. 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಂಎಫ್‌ಸಿ, ಶಿವಮೊಗ್ಗ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01 ಯೋಜನೇತರ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 789 ವೆಚ್ಚ-7:04, ದಿನಾಂಕ: 1.9.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಸರ್ಕಾರದ ಆದೇಶ ಸಂಖ್ಯೆ: ಲಾ 30 ಎಲ್‌ಎಸಿ 2004, ದಿನಾಂಕ: 14.12.2004ಕ್ಕೆ**

**ಅನುಬಂಧ**

| ಕ್ರಮ ಸಂಖ್ಯೆ | ಪದನಾಮ | ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಶಿವಮೊಗ್ಗ | ಸಿವಿಲ್ ನ್ಯಾಯಾಧೀಶರು (ಹಿ.ವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಭದ್ರಾವತಿ | ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ | | | 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ ಭದ್ರಾವತಿ | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಜೆಎಂಎಫ್‌ಸಿ ಶಿವಮೊಗ್ಗ |
|---|---|---|---|---|---|---|---|---|
| | | | | ತೀರ್ಥಹಳ್ಳಿ | ಸೊರಬ | ಹೊಸ ನಗರ | | |
| 1 | 2 | 3 | 4 | 5 | 6 | 7 | 8 | 9 |
| | | | | ಹುದ್ದೆಗಳ | ಸಂಖ್ಯೆ | | | |
| | ಗೆಜೆಟೆಡ್ | | | | | | | |
| 1. | ಜಿಲ್ಲಾ ನ್ಯಾಯಾಧೀಶರು | 1 | - | - | - | - | - | - |
| 2. | ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) | - | 1 | - | - | - | - | - |
| 3. | ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) | - | - | 1 | 1 | 1 | 1 | 1 |
| | ನಾನ್-ಗೆಜೆಟೆಡ್ | | | | | | | |
| 4. | ತೀರ್ಪುಬರಹಗಾರರು | 1 | - | - | - | - | - | - |
| 5. | ಶಿರಸ್ತೇದಾರ | - | 2 | 2 | 2 | 2 | - | - |
| 6. | ಶೀಘ್ರಲಿಪಿಗಾರ | - | 1 | 1 | 1 | 1 | 1 | 1 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 7. | ಪ್ರಥಮದರ್ಜೆ ಸಹಾಯಕ | 1 | 6 | 3 | 3 | 3 | 1 | 1 |
| 8. | ದ್ವಿತೀಯ ದರ್ಜೆಸಹಾಯಕ | - | 6 | 5 | 5 | 5 | - | - |
| 9. | ಬೆರಳಚ್ಚುಗಾರ | 1 | 3 | 2 | 2 | 2 | 1 | 1 |
| 10. | ಬೆರಳಚ್ಚು-ನಕಲುಗಾರ | - | 2 | 1 | 1 | 1 | - | - |
| 11. | ಬೇಲಿಫ್ಸ್ | - | 2 | 2 | 2 | 2 | - | - |
| 12. | ಪ್ರೋಸಸ್ ಸರ್ವರ್ಸ್ | - | 5 | 5 | 5 | 5 | - | - |
| 13. | ಅಟೆಂಡರ್ | 1 | 3 | 2 | 1 | 1 | 1 | 1 |
| 14. | ಜವಾನ | 2 | 4 | 4 | 4 | 4 | 2 | 2 |
| | ಒಟ್ಟು | 7 | 35 | 28 | 27 | 27 | 7 | 7 |

**ಚಿಕ್ಕಹನುಮಂತಯ್ಯ**

ಪಿ.ಆರ್.305 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಗದಗ್ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್ಎಸಿ 2004, ದಿನಾಂಕ: 18.5.2004

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಒಬಿ:2:408:(25) 2004, ದಿನಾಂಕ: 11.1.2005.

**ಪ್ರಸ್ತಾವನೆ:**

ಗದಗ್ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಮುಂಡರಗಿ

2) 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಗದಗ್

3) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನರಗುಂದ

ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 43 ಎಲ್ಎಸಿ 2005, ಬೆಂಗಳೂರು ದಿನಾಂಕ: 17ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಗದಗ್ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಮುಂಡರಗಿ

2) 3ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಗದಗ್

3) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನರಗುಂದ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 306 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ ಸಂಖ್ಯೆ: ಆಕುಕ 121 ಸಿಜಿಎಂ 2005 ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 20 ಎಸ್ಎಂಎಂ 97 ದಿನಾಂಕ: 24.12.2003 ರಲ್ಲಿನ ಕೋಷ್ಟಕದ ಕ್ರಮ ಸಂಖ್ಯೆ (2) ರಲ್ಲಿನ ಕಾಲಂ 2ರಲ್ಲಿ ನಮೂದಾಗಿರುವ "ಜಿಲ್ಲಾ ಆರೋಗ್ಯಾಧಿಕಾರಿ, ಬೆಂಗಳೂರು" ಎಂಬ ಪದದ ಬದಲಾಗಿ" ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳು" ಎಂಬುದಾಗಿ ತಿದ್ದುಪಡಿ ಮಾಡಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 307 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪವಿಭಾಗಗಳ ಅವ್ಯವಹಾರ Parallel Enquiry ತಪ್ಪಿಸುವ ಬಗ್ಗೆ-ಆದೇಶ.

**ಓದಲಾಗಿದೆ :** 1. ಲೋಕಾಯುಕ್ತರ ಪತ್ರದ ಸಂ: ಕಂಪ್ಲೇಂಟ್: ಲೋಕ್: ಬಿಸಿಡಿ: 726, 727, 729 ಮತ್ತು 730: 2002, ದಿನಾಂಕ: 21.11.03.

2. ಆದೇಶ ಸಂ. ಗ್ರಾಅಪ 191 ಜಿಪಅ 03, ದಿನಾಂಕ: 26.5.04.

3. ಆದೇಶ ಸಂ. ಗ್ರಾಅಪ 186 ಜಿಪಅ 02, ದಿನಾಂಕ: 26.5.04.

4. ಹೆಚ್ಚುವರಿ ನಿಬಂಧಕರು (ತನಿಖೆ-1) ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂ:ಲೋಕ್:ಎಆರ್‌ಇ-1: ಇಎನ್‌ಕ್ಯೂ-6:04-05, ದಿನಾಂಕ: 16.11.04.

**ಪ್ರಸ್ತಾವನೆ:**

ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪವಿಭಾಗಗಳಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಒಟ್ಟು 36 ಆರೋಪಗಳ ಬಗ್ಗೆ ಶ್ರೀ ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ವಿಭಾಗ, ಶ್ರೀ ಟಿ. ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಶ್ರೀ ಟಿ. ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಶ್ರೀ ರಘುರಾಮಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಉಡುಪಿ ಇವರುಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಅಪೀಲು) ನಿಯಮ 1957ರ ನಿಯಮ 11 ರಂತೆ ದಿನಾಂಕ: 21.10.2002 ರ ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಪಟ್ಟಿಯನ್ನು ಜಾರಿ ಮಾಡುವ ಮೂಲಕ ಇಲಾಖಾ ವಿಚಾರಣೆ ಪ್ರಾರಂಭಿಸಲಾಗಿತ್ತು. ಇವರು ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿದ್ದರಿಂದ ಈ ಬಗ್ಗೆ ವಿವರವಾದ ಜಂಟಿ ವಿಚಾರಣೆ ನಡೆಸಲು ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಮೇಲೆ ಓದಲಾದ ಕ್ರಮ ಸಂ. (3)ರ ಆದೇಶದಲ್ಲಿ ನೇಮಿಸಲಾಗಿತ್ತು.

ಉಡುಪಿ ಜಿಲ್ಲಾ ಪಂಚಾಯತ್‌ನ ಅಂದಿನ ಅಧ್ಯಕ್ಷರು, ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ಲೋಕಾಯುಕ್ತಕ್ಕೆ ಸಲ್ಲಿಸಿದ್ದ ದೂರಿನ ಮೇಲೆ ಲೋಕಾಯುಕ್ತರು ತನಿಖೆ ನಡೆಸಿ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ ನಿಯಮ 12(3) ರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದೊಂದಿಗೆ ವರದಿ ಸಲ್ಲಿಸುತ್ತಾ, ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪ ವಿಭಾಗದ ವ್ಯಾಪ್ತಿಯ ಕೋಟ ಗ್ರಾಮ ಪಂಚಾಯಿತಿಯ ಮೊಡುಗಿಲಿಯರು ಶಾಲಾ ಕಟ್ಟಡದ ಕಾಮಗಾರಿ, ಕರ್ಜೆ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಮೈರಮಡಿ ರಸ್ತೆ ದುರಸ್ಥಿ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಅಂಗರಕಟ್ಟೆ: ಇಡಮೇರು ರಸ್ತೆ ಕಾಮಗಾರಿ, ಅತ್ರಡಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಭಟ್ರಪಾಲ್ಕೆ ನೀರು ಸರಬರಾಜು ಮತ್ತಿತರ ಕಾಮಗಾರಿಗಳಲ್ಲಿ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಡುಪಿ. ಶ್ರೀ ಟಿ. ಆರ್. ಶಿವರಾಮು, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂ. ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ ಶ್ರೀ ಟಿ. ಜಿ. ತಿಮ್ಮೇಗೌಡ, ಅಂದಿನ ಸಹಾಯಕ ಇಂಜಿನಿಯರ್, ಶ್ರೀ ಕೆ. ದುರ್ಗಾದಾಸ್ ಅಂದಿನ ಸಹಾಯಕ ಇಂಜಿನಿಯರ್ ಶ್ರೀ ಸಿ. ಸೂರ್ಯನಾರಾಯಣ, ಅಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಉಡುಪಿ, ಇವರುಗಳು ಅವ್ಯವಹಾರವೆಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಇವರುಗಳ ಮೇಲೆ ಶಿಸ್ತಿನ ನಡವಳಿಗಳನ್ನು ಪ್ರಾರಂಭಿಸಲು ಹಾಗೂ ಅಂತಹ ಶಿಸ್ತಿನ ನಡವಳಿಗಳನ್ನು ನಡೆಸಲು ಕೆಸಿಎಸ್ (ಸಿಸಿಎ) ನಿಯಮಗಳು 1957ರ ನಿಯಮ 14(ಎ) ರಂತೆ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸುವಂತೆ ಮಾಡಿದ್ದ ಶಿಫಾರಸ್ಸಿನನ್ವಯ ಈ ಪ್ರಕರಣದಲ್ಲಿ ಒಳಗೊಂಡ ಅಧಿಕಾರಿ: ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ನಿಯಮ 14-ಎ ಪ್ರಕಾರ ಮೇಲೆ ಓದಲಾದ ಕ್ರಮ ಸಂ. (2)ರ ಆದೇಶದಲ್ಲಿ ಮಾನ್ಯ ಲೋಕಾಯುಕ್ತಕ್ಕೆ ವಹಿಸಲಾಗಿತ್ತು. ಲೋಕಾಯುಕ್ತ ಶಿಫಾರಸ್ಸಿನಂತೆ ಲೋಕಾಯುಕ್ತದ ವರದಿಯಲ್ಲಿ ಒಳಗೊಂಡಿದ್ದ ನಾಲ್ಕು ಆರೋಪಗಳ ಬಗ್ಗೆ ಮಾತ್ರ ಲೋಕಾಯುಕ್ತಕ್ಕೆ ವಿಚಾರಣೆಯನ್ನು ವಹಿಸಲಾಗಿದ್ದು ಇತರೆ 32 ಆರೋಪಗಳ ಬಗ್ಗೆ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಇಂದೂಧರ ಇವರು ಜಂಟಿ ಇಲಾಖಾ ವಿಚಾರಣೆ ನಡೆಸುತ್ತಿರುವುದರಿಂದ ಮತ್ತು ಆ ವಿಚಾರಣೆಯಲ್ಲಿ ಲೋಕಾಯುಕ್ತಕ್ಕೆ ವಹಿಸಿರುವ 5 ಆಪಾದನೆಗಳು ಒಳಗೊಂಡಿರುವುದರಿಂದ, ಸದರಿ ಆಪಾದನೆಗಳ ಬಗ್ಗೆಯೂ ನಿವೃತ್ತ ಜಿಲ್ಲಾ ನ್ಯಾಯಾಧೀಶರಿಂದಲೇ ವಿಚಾರಣೆ ಮುಂದುವರೆಸಲು ಸರ್ಕಾರವು ಉದ್ದೇಶಿಸುತ್ತದೆಯೇ ಎಂಬ ಬಗ್ಗೆ ಸ್ಪಷ್ಟೀಕರಣ ನೀಡುವಂತೆ ಲೋಕಾಯುಕ್ತದ ಹೆಚ್ಚುವರಿ ನಿಬಂಧಕರು (ತನಿಖೆ-1) ಇವರು ಮೇಲೆ ಓದಲಾದ ಕ್ರಮ ಸಂ. (4)ರ ತಮ್ಮ ಪತ್ರದಲ್ಲಿ ಕೋರಿದ್ದಾರೆ.

ಈ ಬಗ್ಗೆ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದೆ. ಉಡುಪಿ ಜಿ.ಪಂ.ಇಂ.ಉ.ವಿ. ದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಲೋಕಾಯುಕ್ತ ತನಿಖೆಯಂತೆ ಕೇವಲ 4 ಆಪಾದನೆಗಳಲ್ಲದೆ ಉಳಿದ ಆಪಾದನೆಗಳ ಬಗ್ಗೆ ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವರದಿಯನ್ನು ಆಧರಿಸಿ ಈಗಾಗಲೇ ಇಲಾಖಾ ವಿಚಾರಣೆ ಪ್ರಾರಂಭಿಸಿ ವಿವರವಾದ ವಿಚಾರಣೆಗೆ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾ ಅಧಿಕಾರಿಯಾಗಿ ನೇಮಿಸಿರುತ್ತದೆ. ಲೋಕಾಯುಕ್ತಕ್ಕೆ ವಹಿಸಲಾದ 4 ಆರೋಪಗಳ ಪೈಕಿ 2 ಆರೋಪಗಳು ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಡೆಸುತ್ತಿರುವ ವಿಚಾರಣೆಯಲ್ಲಿ ಒಳಗೊಂಡಿರುತ್ತದೆ. ಆದುದರಿಂದ ಈಗ ಲೋಕಾಯುಕ್ತ ವತಿಯಿಂದ ಇಲಾಖಾ ವಿಚಾರಣೆ ನಡೆಸಬೇಕಾದ ಆರೋಪಗಳು ಕೇವಲ 2 ಮಾತ್ರವಾಗಿರುತ್ತವೆ.

ಲೋಕಾಯುಕ್ತ ಹೆಚ್ಚುವರಿ ರಿಜಿಸ್ಟ್ರಾರ್‌ರವರ ಪತ್ರದಲ್ಲಿ ತಿಳಿಸಿರುವಂತೆ ಈ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಬಹುತೇಕ ಅಂಶಗಳ ಮೇಲೆ ಈಗಾಗಲೇ ನಿವೃತ್ತ ನ್ಯಾಯಾಧೀಶರಿಂದ ಇಲಾಖಾ ವಿಚಾರಣೆಯನ್ನು ನಡೆಸಲಾಗುತ್ತಿರುವುದರಿಂದ, ಸರ್ಕಾರವು ಲೋಕಾಯುಕ್ತಕ್ಕೆ ವಹಿಸಿರುವ ಇಲಾಖಾ ವಿಚಾರಣೆಯ 2 ಆರೋಪಗಳ ಮೇಲಿನ ವಿಚಾರಣೆಯನ್ನೂ ಸಹ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಇಂದೂಧರ ಇವರಿಗೆ ವಹಿಸುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 191 ಜಿಪಅ 03 ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ: ಉಪ ವಿಭಾಗದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಆದೇಶ ಸಂ. ಗ್ರಾಅಪ 191 ಜಿಪಅ 03, ದಿನಾಂಕ: 26.5.04 ರಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಿರುವುದನ್ನು ಮಾರ್ಪಡಿಸಿ, ಪ್ರಕರಣವನ್ನು ಅವರಿಂದ ಹಿಂಪಡೆದು ಉಡುಪಿ ಜಿಲ್ಲಾ ಪಂಚಾಯತ್‌ನ ಅಕ್ರಮಗಳಿಗೆ ಸಂಬಂಧಿಸಿದಂತೆ ಬಹುತೇಕ ಆಪಾದನೆಗಳ ಬಗ್ಗೆ ಆದೇಶ ಸಂಖ್ಯೆ: ಗ್ರಾಅಪ 186 ಜಿಪಅ 02 ದಿನಾಂಕ: 26.5.04ರ ಪ್ರಕಾರ ವಿವರವಾದ ಜಂಟಿ ವಿಚಾರಣೆ ನಡೆಸುತ್ತಿರುವ ಶ್ರೀ ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರಿಗೆ ವಹಿಸಿ ಸರ್ಕಾರವು ಆದೇಶಿಸಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆ ಯಾವ ಹಂತಕ್ಕೆ ನಿಂತಿದೆಯೋ ಆ ಹಂತದಿಂದ ಮುಂದುವರಿಸತಕ್ಕದ್ದು.

ಪ್ರಾಜೆಕ್ಟ್ ಡೈರೆಕ್ಟರ್/ ಆಫೀಸರ್ (DRDA) ಜಿಲ್ಲಾ ಪಂಚಾಯತ್ ಉಡುಪಿ ಇವರೇ ಈ ಪ್ರಕರಣದಲ್ಲೂ ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು.

ಈ ವಿಚಾರಣೆಗೂ ಆದೇಶ ಸಂ. ಗ್ರಾಅಪ 186 ಜಿಪಅ 02, ದಿನಾಂಕ: 26.5.04 ರಲ್ಲಿ ಮಂಜೂರಾಗಿರುವ ಸಂಭಾವನೆಯೇ ಅನ್ವಯಿಸುತ್ತದೆ. ಇದಕ್ಕಾಗಿ ಪ್ರತ್ಯೇಕ ಸಂಭಾವನೆ ಮಂಜೂರಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸಿ. ಸುಂದರ**

ಪಿ.ಆರ್. 308 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ), ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ವಿ. ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಇವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿದ ಸರ್ಕಾರದ ಆದೇಶದ ವಿರುದ್ಧ ಸನ್ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಕೆ ಹಾಗೂ ಮೇಲ್ಮನವಿ ಎತ್ತಿ ಹಿಡಿದು ಸರ್ಕಾರಿ ಆದೇಶ ರದ್ದುಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಎಸ್‌ಇಎನ್ 97, ದಿನಾಂಕ: 24.11.2003.
2. ಶ್ರೀ ವಿ. ಬಿ. ಹಿರೇಗೌಡರ್ ರವರ ದಿನಾಂಕ: 17.2.2004ರ ಮೇಲ್ಮನವಿ.

**ಪ್ರಸ್ತಾವನೆ:**

ಕೃಷ್ಣ ಮೇಲ್ದಂಡೆ ಯೋಜನೆ, ಆಲಮಟ್ಟಿಯಲ್ಲಿ ಸಮೂಹ ವ್ಯವಸ್ಥಾಪಕರು ಹಾಗೂ ವಿಶೇಷ ಜಿಲ್ಲಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಭೂ ಸ್ವಾಧೀನ ಪ್ರಕರಣಗಳಲ್ಲಿ ಅಧಿಕಾರ ನಿಹಿತವಾಗಿದ್ದರೂ ಯಥೋಚಿತವಾಗಿ ಅಧಿಕಾರ ಚಲಾಯಿಸಿ ಕರ್ತವ್ಯ ನಿರ್ವಹಿಸದೇ ಮತ್ತು ಕೆಲವೊಂದು ಸನ್ನಿವೇಶಗಳಲ್ಲಿ ಯೋಜನೆಯಡಿ ಬರುವ ಸಂತ್ರಸ್ಥರಿಗೆ ಪುನರ್ ವಸತಿ ಕೇಂದ್ರಗಳಲ್ಲಿ ಈಗಾಗಲೇ ವಸತಿ ಸೌಲಭ್ಯ ಕಲ್ಪಿಸಲಾಗಿದ್ದರೂ ಅದನ್ನು ಖಚಿತ ಪಡಿಸಿಕೊಳ್ಳದೆ ಮತ್ತೆ ಭೂಸ್ವಾಧೀನ ಪಡಿಸಿಕೊಳ್ಳಲು ಮುಂದಾಗಿ ಬೇಜವಾಬ್ದಾರಿತನದಿಂದ ವರ್ತಿಸಿದ ಹಾಗೂ ಸಂತ್ರಸ್ಥರ ಕುಟುಂಬಗಳಿಗೆ ನೀಡುವ ಅನುಕಂಪ ಪರಿಹಾರ ಧನ ವಿತರಣೆಯಲ್ಲಿ ದುರುಪಯೋಗದಿಂದ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳು ನಷ್ಟವಾಗುತ್ತಿದ್ದ ಬಗ್ಗೆ ಕಾಲಕಾಲಕ್ಕೆ ಪರಿಶೀಲನೆ: ಮೇಲ್ವಿಚಾರಣೆ ಮಾಡಿ ಸರ್ಕಾರದ ಹಿತಾಸಕ್ತಿಯನ್ನು ಕಾಪಾಡಲು ವಿಫಲರಾಗಿ ಸದರಿ ಅಕೃತ್ಯದಲ್ಲಿ ಭಾಗಿಯಾಗುವ ಮೂಲಕ ಕರ್ತವ್ಯಚ್ಯುತಿ ಎಸಗಿದ ಆರೋಪಗಳಿಗಾಗಿ ಶ್ರೀ ವಿ. ಬಿ. ಹಿರೇಗೌಡರ್, ಕೆ. ಎ.ಎಸ್., ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಮೇಲೆ (1) ರಲ್ಲಿ ಓದಲಾದ ದಿನಾಂಕ: 24.11.2003ರ ಸರ್ಕಾರಿ ಆದೇಶದಲ್ಲಿ ಶ್ರೀ ವಿ. ಬಿ. ಹಿರೇಗೌಡರ್ ನಿವೃತ್ತ ಕೆ.ಎ.ಎಸ್., ಅಧಿಕಾರಿ ರವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ. 250-00 (ಇನ್ನೂರ ಐವತ್ತು ರೂಪಾಯಿಗಳನ್ನು ಮಾತ್ರ) ನಾಲ್ಕು ತಿಂಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಲಾಗಿತ್ತು. ಈ ಬಗ್ಗೆ ಶ್ರೀ ವಿ. ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ರವರು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 18 ರಂತೆ ಸನ್ಮಾನ್ಯ ರಾಜ್ಯಪಾಲರಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 17.2.2004ರ ಮೇಲ್ಮನವಿ ಸಲ್ಲಿಸಿ ತಮ್ಮ ಮೇಲೆ ವಿಧಿಸಿದ ದಂಡನೆಯನ್ನು ರದ್ದುಪಡಿಸಲು ಕೋರಿದ್ದಾರೆ. ಶ್ರೀ ವಿ. ಬಿ. ಹಿರೇಗೌಡರ್ ಮೇಲ್ಮನವಿ ಮತ್ತು ತತ್ಸಂಬಂಧ ಶಿಸ್ತು ಪ್ರಾಧಿಕಾರದ ಪರಿಶೀಲನಾ ಟಿಪ್ಪಣಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 89 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2005**

I have considered the appeal submitted by Sri V. B. Hiregowdar, Group Manager, UKP (Retd). against the Government Order dated 24.11.2003 imposing the penalty of with holding a sum of Rs. 250/- per month from the pension for four months. I have considered the appeal in the light of the contentions made therein and the connected inquiry records and the appeal records. As seen from the records, the appellant has been absolved of the two charges viz., charges 3 and 4 and is booked for charges 1 and 2. The first charge relates to land acquisition proceedings for the purpose of hospital building at Havaragi and the charge is that the acquisition proceedings were not in itiated in time and caused delay. But perusal of records shows that Special Land Acquisition Officer was the land acquisition officer concerned and had sought certain clarification as to whether the project comes under IPP or UKP as land has to be inspected and selected by them and in case the project comes under IPP the proposal had to be pursued with the Assistant Commissioner, Bagalkot Sub-Division. The appellant being the group manager sought clarification from the Commissioner on the doubts raised by the SLAO. No Official witness has deposed against the appellant in respect of the charge. In fact, Md. Salauddin, the Rehabilitation Officer and incharge SLAO who was also a witness has supported the AGO's action. Also as seen from the records, the proposal from the Health Department has been received only on 18.12.1996 and there has been delay on the part of the Health Department in submitting an Official proposal for acquisition. Since the India Population Project of Health Department required the land the proposal for land acquisition comes under the jurisdiction of Assistant Commissioner of the Sub-Division. As such there was evidently no fault on the part of the group Manager in the matter.

The Second Charge is that the appellant had taken action to rehabilitate Mannikeri villagers by taking steps to acquire land though they were rehabilitated at yetnatti Village. As seen from the records, the 4 (1) notification was issued as per the oral directions of the commissioner which was communicated by the General Manager to the Assistant Executive Engineer, Bilagi Sub-Division. The people were reluctant to move over to Yetnatti as it had deep cotton soil and cracks developed in the Buildings. The Revenue Inspector's evidence in the Inquiry Shows that action taken by the AGO was correct and also the local leaders including the MLA, Biligi and the President, Project Displaced Persons Association were demanding for alternate rehabilitation. The SLAO also has deposed in favour of the appellant in this regard. Therefore, this charge against the appeallant only does not stand to reason.

Having gone thorugh the records, I find that due care was not observed. It is not clear if the commissioner followed his 'instructions' in writing lateron which were supposed to have been given on the spot orally. If there was some thing wrong it cannot be attributed only to the Project officer. Obviously it was a case of collective neglect, probably in a situation of urgency and stress. Though the punishment is not very serious, it may not be fair to select the project Officer only for any punishment. Under these Circumstances the disciplinary authority's order in the case is quashed. There is no sufficient material or evidence to punish the Group Manager, Appellant only. I therefore exonerate him of the two charges also, for which he has been punished.

**T. N. CHATURVEDI**
Governor of Karnataka.
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್. ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ, (ಸೇವೆಗಳು-3).

ಪಿ.ಆರ್.309

**ವಿಷಯ :** ಶ್ರೀ ಎಂ. ಕೆ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ, ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1. ನೋಟೀಸ್ ಸಂಖ್ಯೆ: ಸಿಆಸುಇ 63 ಎಸ್ಇಎನ್ 2004 ದಿನಾಂಕ: 16.7.2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಸೇವೆಗಳು ಶಾಖೆಯ ಉಪ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಹಲವಾರು ಕಡತಗಳಲ್ಲಿ ಕ್ರಮ ಕೈಗೊಳ್ಳದೆ ಹಾಗೆಯೇ ತಮ್ಮ ಬಳಿ ಇಟ್ಟುಕೊಂಡು ಕರ್ತವ್ಯ ಲೋಪವೆಸಗಿ ಹಾಗೂ ಗಣಕ ಯಂತ್ರದಲ್ಲಿ ಕಡತದ ಚಲನೆ ಬಗ್ಗೆ ಅಸಂಬದ್ಧ ನಮೂದುಗಳನ್ನು ಮಾಡಿ ಬೇಜವಾಬ್ದಾರಿಯಿಂದ ವರ್ತಿಸಿರುವ ಆರೋಪಕ್ಕಾಗಿ ಶ್ರೀ ಎಂ. ಕೆ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಅವರಿಗೆ ಮೇಲೆ ಓದಲಾದ ದಿನಾಂಕ: 16.7.2004ರ ನೋಟೀಸ್ ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸಿಗೆ ಆರೋಪಿತರು ಸಮಜಾಯಿಷಿಯನ್ನು ನೀಡಿರುವುದಿಲ್ಲ. ಆದ್ದರಿಂದ ಅವರ ವಿರುದ್ಧದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿರುವ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್ಇಎನ್ 2004 ದಿನಾಂಕ: 21ನೇ ಫೆಬ್ರವರಿ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ಕೆ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಎಂ. ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 3 ಸೇಇವಿ 96 ದಿನಾಂಕ: 24.4.98 ಹಾಗೂ ಸಿಆಸುಇ 45 ಸೇಇವಿ 2001 ದಿನಾಂಕ: 4.3.2002ರಲ್ಲಿ ನಿಗದಿಪಡಿಸಿರುವಂತೆ ಗೌರವಧನ ಹಾಗೂ ಪ್ರಯಾಣ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಂತೇಶಯ್ಯ, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.310

**ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ, (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ :** 2005-06ನೇ ಶೈಕ್ಷಣಿಕ ವರ್ಷಕ್ಕೆ ಉಚಿತ ವಿತರಣೆ ಪಠ್ಯ ಪುಸ್ತಕಗಳ ವೆಚ್ಚಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ನಿರ್ದೇಶಕರು, ಪಠ್ಯಪುಸ್ತಕ ನಿರ್ದೇಶನಾಲಯ, ಬೆಂಗಳೂರು ಅವರ ಪತ್ರದ ಸಂಖ್ಯೆ:ಪಪುನಿ:ಲೆಶಾ:ಆಯವ್ಯಯ:6: 2004-05 ದಿನಾಂಕ: 17.11.2004.

**ಪ್ರಸ್ತಾವನೆ:**

ನಿರ್ದೇಶಕರು, ಪಠ್ಯ ಪುಸ್ತಕ ನಿರ್ದೇಶನಾಲಯ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 17.11.2004ರ ಪತ್ರದಲ್ಲಿ 2005-06ನೇ ಶೈಕ್ಷಣಿಕ ವರ್ಷದಲ್ಲಿ 1 ರಿಂದ 10ನೇ ತರಗತಿಯವರೆಗಿನ ವಿವಿಧ ಶೀರ್ಷಿಕೆಗಳ ಅಂದಾಜು 130 ಲಕ್ಷ ಪಠ್ಯ ಪುಸ್ತಕಗಳನ್ನು ಅಲ್ಪಾವಧಿ ಟೆಂಡರ್ ಮೂಲಕ ಖಾಸಗಿ ಮುದ್ರಕರಿಂದ ಮುದ್ರಿಸಿ ರಾಜ್ಯಾದ್ಯಂತ ಎಲ್ಲಾ ಫಲಾನುಭವಿಗಳಿಗೂ ವಿತರಿಸಲು ಅನುದಾನದ ಅವಶ್ಯಕತೆ ಇದ್ದು ಅನುದಾನವನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 316 ಯೋಯೋಕಾ 2004, ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

2005-06ನೇ ಶೈಕ್ಷಣಿಕ ವರ್ಷದಲ್ಲಿ 1 ರಿಂದ 10ನೇ ತರಗತಿವರೆಗಿನ ವಿವಿಧ ಶೀರ್ಷಿಕೆಗಳ ಅಂದಾಜು 130 ಲಕ್ಷ ಪಠ್ಯಪುಸ್ತಕಗಳನ್ನು ಅಲ್ಪಾವಧಿ ಟೆಂಡರ್ ಮೂಲಕ ಖಾಸಗಿ ಮುದ್ರಕರಿಂದ ಮುದ್ರಿಸಿ ರಾಜ್ಯಾದ್ಯಂತ ಎಲ್ಲಾ ಫಲಾನುಭವಿಗಳಿಗೂ ಉಚಿತವಾಗಿ ವಿತರಿಸಲು ನಿರ್ದೇಶಕರು, ಪಠ್ಯ ಪುಸ್ತಕ ನಿರ್ದೇಶನಾಲಯ, ಬೆಂಗಳೂರು ಅವರಿಗೆ ಈ ಮೂಲಕ ಆದೇಶಿಸುತ್ತದೆ.

ಈ ಉದ್ದೇಶಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 62 ಬಿಆರ್ಎನ್ 2005 ದಿನಾಂಕ: 31.1.2005 ರಲ್ಲಿ ರೂ. 500 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ ಟೆಂಡರ್ ನಿಯಮಗಳನ್ನು ಪಾಲಿಸುವ ಮೂಲಕ ಪಠ್ಯ ಪುಸ್ತಕಗಳ ಮುದ್ರಣವನ್ನು ಕೈಗೊಳ್ಳತಕ್ಕದ್ದು. ಹಣವನ್ನು ಪಾವತಿ ಮಾಡುವ ಮುನ್ನ ಸರಬರಾಜು ಮಾಡಲ್ಪಟ್ಟ ಪಠ್ಯಪುಸ್ತಕಗಳ ಪ್ರಮಾಣ, ಗುಣಮಟ್ಟ ಇತ್ಯಾದಿಗಳನ್ನು ಖಾತರಿಪಡಿಸಿಕೊಳ್ಳತಕ್ಕದ್ದು. ಈ ಸಂಬಂಧದ ವೆಚ್ಚವನ್ನು ಆರ್ಥಿಕ ಇಲಾಖೆಯು ಅನುದಾನ ಬಿಡುಗಡೆ ಮಾಡಿರುವ ಲೆಕ್ಕ ಶೀರ್ಷಿಕೆ 2202-01-800-1-13-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. ಈಗ ಬಿಡುಗಡೆ ಮಾಡಿರುವ ಆಯವ್ಯಯವನ್ನು 2005-06ನೇ ಸಾಲಿನ ಉಚಿತ ಪಠ್ಯ ಪುಸ್ತಕಗಳ ಸರಬರಾಜಿಗೆ ಸಂಬಂಧಿಸಿದ ವೆಚ್ಚಗಳಿಗೆ ಮಾತ್ರ ಬಳಸತಕ್ಕದ್ದು.

ಉಚಿತ ಪಠ್ಯಪುಸ್ತಕಗಳು ನಿಗದಿತ ಸಮಯದಲ್ಲಿ ಮುದ್ರಣಗೊಂಡು ಫಲಾನುಭವಿಗಳಿಗೆ ಸಕಾಲದಲ್ಲಿ ತಲುಪುವ ಕುರಿತು ನಿರ್ದೇಶಕರು, ಪಠ್ಯಪುಸ್ತಕ ನಿರ್ದೇಶನಾಲಯ ಅವರು ಉಸ್ತುವಾರಿ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.311

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.